C. M. Veerabhadra Sharma. 2065

# ಓಂ

ಶ್ರೀ ಮಹಾ ಶ್ರೀಶೈಲನಿವಾಸಿಗಳಾದ

ನಿರಾಭಾರಿ ಚನ್ನಬಸವ ಸ್ವಾಮಿಜೀಯವರ

೩೦೩

# ...ಂತೋಪದೇಶ

ಸನ್ ೧೯೩೩

0-4-0

ಜಯಶಂಕರ

## ಶ್ರೀ ಮಹಾ ಶ್ರೀಶೈಲನಿವಾಸಿಗಳಾದ ನಿರಾಭಾರಿ

## ಚನ್ನಬಸವ ಸ್ವಾಮಿಜೀಯವರ

# ಹಿತೋಪದೇಶ



ಈ ಜಗತ್ತಿನ ಉತ್ಪತ್ತಿ ಸ್ಥಿತಿಲಯಾದಿಗಳಿಗೆ ಮೂಲಕಾರಣನಾದ ಪರಮೇಶ್ವರನು ಸಂಸಾರವೆಂಬ ಮಹಾ ಸಮುದ್ರದಲ್ಲಿ ಬಿದ್ದು ಮುಕ್ತಿಫಲವಂ ಕಾಣದೆ ಅನ್ಯಾಯವಾಗಿ ಕೆಟ್ಟು ಹೋಗುತ್ತಿರುವ ಪ್ರಾಣಿಗಳನ್ನುದ್ಧಾರ ಮಾಡಲೋಸುಗ ನಿಖಿಲತತ್ವಾರ್ಥ ಗುಂಭಿತವಾಗಿರುವ ದೊಡ್ಡದೊಂದು ಶಿವದೀಕ್ಷಾ ಸಂಸ್ಕಾರವೆಂಬ ಸತ್ಕರ್ಮವನ್ನು ನಿಗಮಾಗಮಂಗಳಲ್ಲಿ ಹೇಳಿದ್ದಾನಷ್ಟೆ ಇಂಥಾ ನಿಗಮಾಗಮ ಸಮ್ಮತವಾದ ಶಿವದೀಕ್ಷ ಸಂಸ್ಕಾರವನ್ನು ಯಾವನು ಹೊಂದುತ್ತಾನೋ ಅವನೇ ಇಬಂಧ ತ್ರಯಗಳಿಂದ ಬಿಡುಗಡೆಯನು, ಹೊಂದಿ ಶಿವಲಿಂಗ ಪೂಜಾಧಿಕಾರವನ್ನೂ ತೀರ್ಥಪ್ರಸಾಧವನ್ನೂ ಮುಕ್ತಿಯನ್ನೂ ಸಕಲಪುರುಷಾರ್ಥಗಳನ್ನು ನಿರಾಯಾಸದಿಂದ ಪಡೆದುಕೊಳ್ಳುತ್ತಾನೆ. ಅವನೇ ಈಜಗತ್ತಿನಮಾನ್ಯವರಲ್ಲಿ ಶ್ರೇಷ್ಠನೆನಸಿಕೊಳ್ಳುತ್ತಾನೆ ಅವನೇ ಕುಲವಂತನೂ ಛಲವಂತನೂ ಸೀಲವಂತನೂ ಧರ್ಮಿಷ್ಠನೂಯನಿಸಿಕೊಳ್ಳುತ್ತಾನೆ. ಯಾವನು ಇ ನಿಗಮಾಗಮ ಸಮ್ಮತವಾದ ಶಿವದೀಕ್ಷಾ ಸಂಸ್ಕಾರವನ್ನು ಹೊಂದುವದಿಲ್ಲವೋ ಅವನೇ ಈ ಶಿವಲಿಂಗ ಪೂಜಾವಿದೂರನಾಗಿ ಜಗತ್ತಿನಮಾನ್ಯರಲ್ಲಿ ಪರಮ ಪಾಪಿಷ್ಠನೂ ನೀಚನೂಯೆನಿಸಿಕೊಳ್ಳುತ್ತಾನೆ. ಅವನೇ ಕುಲಹೀನನೂ ಅನಾಚಾರಿಯೂ ಅಧರ್ಮಿಯೂ ಅಧಮನೂಯನಿಸಿಕೊಳ್ಳುತ್ತಾನೆ. ಹಾಗೆಯುಂಬದಾಗಿ ಈ ಸಿದ್ಧಾಂತವನ್ನು ಶ್ರೀ ರೇಣುಕಾಚಾರ್ಯ ನೀಲಕಂಠ ಶಿವಚಾರ್ಯ ಸೋಮಾರಾಧ್ಯ ಇ ಮೊದಲಾದ ಮಹಿನೀಯರು ಭಾಷ್ಯಾದಿಗಳ ಮುಖದಿಂದ ಸ್ಥಾಪಿಸಿದ್ದಾರೆ.

ಮತ್ತು ಮಹಾತೇಜಃಪುಂಜವಾದ ಇ ಪರಶಿವಜ್ಞಾನವು ಸ್ವರ್ಗ ಮರ್ತ್ಯ ಪಾತಾಳವೆಂಬ ಮೂರು ಲೋಕಂಗಳಲ್ಲಿ ಯುಷ್ಟು ಪ್ರಾಶಸ್ತ್ಯವನ್ನು ಪಡೆದುಕೊಂಡಿಧಿಯೋ ಅಷ್ಟು ಪ್ರಾಶಸ್ತ್ಯವನ್ನು ಇ ಶಿವದೀಕ್ಷಾ ಸಂಸ್ಕಾರವು ಪಡೆದುಕೊಂಡತಿ ಪ್ರಖ್ಯಾತವಾಗಿಧೆ. ದಯಾನಿಧಿಯಾದ ಪರಶಿವಮೂರ್ತಿಯನ್ನು ಕಟ್ಟಕೆಳೆ

ಂದು ಕೊಡುವದಕ್ಕೂ ವೀರಭಕ್ತಿಯನ್ನು ಹುಟ್ಟಿಸುವದಕ್ಕೂ ಅನ್ಯುತಸ್ಥಾನತ ವನ್ನು ಪಡೆಯುವದಕೂ, ಈ ಶಿವದೀಕ್ಷಾ ಸಂಸ್ಕಾರನೇ ಮೂಲಕಾರಣವಾಗಿ ಥೆ. ಹೀಗಿರುಪದರಿಂದಲೇ ವೇದಾಗಮಸಾರಭೂತವಾದ ವೀರಶೈವ ಧರ್ಮಶಿರೋ ಮಣಿಯಲ್ಲಿ--

ದೀಕ್ಷೈವ ಮೋಕ್ಷದಾಪುಂಸಾಂಚಿದಚಿಚ್ಛಕ್ತಿ ಕಾರಣಂ।
ನಾಸ್ತಿ ದೀಕ್ಷಾ ಸಮಂತೀರ್ಥಂನಾಸ್ತಿ ದೀಕ್ಷಾ ಸಮಂತಪಃ ॥
ನಾಸ್ತಿ ದೀಕ್ಷಾ ಸಮಂ ಸೀಲಂ ನಾಸ್ತಿ ದೀಕ್ಷಾ ಸಮಂ ಧನಂ।
ನಾಸ್ತಿ ದೀಕ್ಷಾ ಸಮೋಧರ್ಮೋನಾಸ್ತಿ ದೀಕ್ಷಾ ಸಮೋಗುಣಃ ॥
ನಾಸ್ತಿ ದೀಕ್ಷಾ ಸಮಂ ಜ್ಞಾನಂ ನಾಸ್ತಿ ದೀಕ್ಷಾ ಸಮಂ ಕುಲಂ |

ಯಂದು ಇತ್ಯಾದಿ ಬಹು ಗ್ರಂಥಗಳು ಶಿವದೀಕ್ಷಾಮಹಿಮೆಯನ್ನು ಪ್ರತಿಪಾದನಾ ಮಾಡುತ್ತಲಿವೆ.

ಜಗತ್ಪ್ರಸಿದ್ಧನಾದ ಶ್ರೀ ರಾಮಚಂದ್ರನಾದರೂ ಶಿವದೀಕ್ಷಾ ಸಂಸ್ಕಾರ ಪ್ರಭಾವದಿಂದಲೇ ತನಗೊದಗಿದ ಸಂಕಷ್ಟಗಳನ್ನು ಪರಿಹರಿಸಿಕೊಂಡು ಸುಖವಾಗಿ ಬಾಳಿದನು. ಅದು ಹೇಗಂದರೆ ಶ್ರೀ ರಾಮಚಂದ್ರನು ತನ್ನ ಧರ್ಮಪತ್ನಿಯಾದ ಸೀತಾದೇವಿಯನ್ನು ಧೂರ್ತನಾದ ರಾವಣಾಸುರನು ಅಪಹರಿಸಿಕೊಂಡು ಹೋಗಲು ಆಗ ಶ್ರೀ ರಾಮಚಂದ್ರನು ಆ ರಾವಣಾಸುರನನ್ನು ಜಯಿಸಿ ಸೀತೆಯನ್ನು ತರಬೇಕೆಂದು ನಾನೋಪಾಯಗಳನ್ನೆ ಸಗಿತಲೆ ಕೆಳಗು ಮಾಡಿದಾಗ್ಯೂ ಕಡೆಗೆಯೇನೂ ಆಗಲಿಲ್ಲಾ ಆ ಕಾರಣದಿಂದ ಶ್ರೀ ರಾಮಚಂದ್ರನು ಬಹಳವಾಗಿ ಬಳಲಿ ದುಃಖಪಟ್ಟು ಅಳುತ್ತಾ ನಿದ್ರೆ ಇಲ್ಲದೆ ಪೌರುಷ ಶೂನ್ಯನಾಗಿ ರಾತ್ರಿ ಹಗಲೂ ಆಹಾರವಿಲ್ಲದೆ ತಮ್ಮನಾದ ಲಕ್ಷ್ಮಣನೊಂದಿಗೆ ತನ್ನ ಪ್ರಾಣಗಳನ್ನು ಬಿಡಲಿಚ್ಛಿಸಿದನು ಅಷ್ಟರಲ್ಲಿ ಲೋಪಾಮುದ್ರಾದೇವಿಯ ಪತಿಯಾದ ಅಗಸ್ತ್ಯಮಹಾ ಮುನಿಯು ಆ ರಾಮಚಂದ್ರನ ಅವಸ್ಥೆಯಂತಿಳಿದು ಅವನ ಸಮೀಪಕ್ಕೆ ಬಂದು ಯಲೈರಾಜ ಶ್ರೇಷ್ಠನೆಯಾತಕ್ಕೆ ದುಃಖಿಸುತ್ತೀಯೆ ಸೀತೆಯು ಯಾರಿಗೆ ಹೆಂಡತಿಯು ಏನು ಸುದ್ದಿ ಅವಳ್ಯಾರು ನೀನಾರು ಅವಳಿಗೂ ನಿನಗೂ ಏನು ಸಮ್ಮಂಧ ವಿಥೆಸ್ವಲ್ಪ ಹೊತ್ತು ನಿನ್ನ ಮನಸ್ಸಿನಲ್ಲಾದರೂ ವಿಚಾರಿಸಿ ನೋಡುಹಾಗೆಯಂದು ಅಗಸ್ತ್ಯಮಹರ್ಷಿಗಳು ವೇದಾಂತಮಯವಾದ ತತ್ವಾರ್ಥವನ್ನು ಬಹಳ ವಿಸ್ತಾರವಾಗಿ ಹೇಳಿದಾಗ್ಯೂ ಶ್ರೀ ರಾಮಚಂದ್ರನು ಆ ತತ್ವಾರ್ಥವನ್ನು ಕಿವಿಗೊಟ್ಟು ಕೇಳದೆ ಯಲೈಮುನಿವರ್ಯನೆ ನೀನು ಇಷ್ಟು ತತ್ವಾರ್ಥವನ್ನು ಕಷ್ಟಪಟ್ಟು ಯನಗೆ ಹೇಳಿಕೊಟ್ಟಾಗ್ಯೂ ನನ್ನ ದುಃಖವಾದರೂ ಹೋಗಲಿಲ್ಲಾ ನನಗೆ ಶಿವಸಾಯುಜ್ಯರೂಪವಾದ ಮುಕ್ತಿಯಾದ

ರೂ ಆಗಲಿಲ್ಲಾ ತೆಗೆಟರೀ ಇಂಥಾ ಅಸಾರವಾದ ತತ್ವಾರ್ಥವನ್ನು ಕೇಳುವ ದರಿಂದಾಗಲಿ ಹೇಳುವದರಿಂದಾಗಲಿ ಏನು ಪ್ರಯೋಜನ ರಾವಣನನ್ನು ಹತಿಸಿ ದುಃಖವನ್ನು ಬಿಟ್ಟು ಹೆಂಡತಿಯನ್ನು ಹೊಂದಿ ಸುಖಿಸಿ ಕಡೆಗೆ ಶಿವಸಾಯುಜ್ಯ ರೂಪವಾದ ಮುಕ್ತಿಯನ್ನು ಹೊಂದುವದಕ್ಕೆ ಉಪಾಯವೇನಾದರೂ ಇದ್ದರೆ ನೀನು ನನಗೆ ಹೇಳು ನಿನಗಿಂತಲೂ ನನಗೆ ಬೇರೆ ಗುರುವಿಲ್ಲಾ ಹಾಗೆಯಂದು ಬೆಸಗೊಳ್ಳಲು ಆಗ ಆ ಮುನೀಶ್ವರನು ಹಾಗೆಯೇ ಸ್ವಲ್ಪ ಹೊತ್ತು ತನ್ನೊಳು ಆಲೋಚಿಸಿ ನೋಡಿ ಹಾಗಾದರೆ ಯಲೈ ರಾಜೋತ್ತಮನೆ ನೀನು ವೇದಾಗಮಗಳಲ್ಲಿ ಪ್ರಸಿದ್ಧವಾದ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿ ಪಾರ್ವತಿ ಪತಿಯಾದ ಪರಮೇಶ್ವರನನ್ನು ವಿಧಿವತ್ತಾಗಿ ಪೂಜಿಸು ಅದರಿಂದ ಈಶ್ವರನು ನಿನಗೆ ಪ್ರಸನ್ನನಾಗಿ ಬೇಡಿದಿಷ್ಟಾರ್ಥಗಳನ್ನು ಕೊಡುತ್ತಾನೆ ಆಶಿವದೀಕ್ಷೆಯನ್ನು ಹೊಂದದೆ ಸುಮ್ಮನೆ ನೀನು ಶಿವಲಿಂಗ ಪೂಜೆಯನ್ನು ಮಾಡಿದರೆ ಆಶಿವನು ನಿನಗೆ ಪೂಜಾಫಲವನ್ನು ನಿಜವಾಗಿ ಕೊಡುವದಿಲ್ಲಾ ಅದೇನುಕಾರಣವೆಂದರೆ-ಯಥಾಮೃಗಪತಿಂ ದೃಷ್ಟ್ವಾಮಹಾಭೀತೋ ವನೇಗಜಃ | ಅದೀಕ್ಷಿತಾರ್ಚನೇ ಲಿಂಗಂ ತಥಾಭೀತೋಮಹೇಶ್ವರೀ॥ಯೆಂದು ಶಿವಾಗಮಂಗಳಲ್ಲಿ ಈಶ್ವರನು ಪಾರ್ವತಾ ದೇವಿಗೆ ಯಥಾರ್ಥವನ್ನು ಭೋಧಿಸಿರುವನು ಆದು ಕಾರಣ ಶಿವದೀಕ್ಷೆಯಂ ಹೊಂದದ ನರಾಧಮನು ಶಿವನಂ ಮುಟ್ಟಿ ಪೂಜಿಸಲಾಗದು

ಮತ್ತು ಶೀವದೀಕ್ಷ ಇಲ್ಲದವನು ಪಾವನವಾದ ಆ ಪರಶಿವನ ತೀರ್ಥ ಪ್ರಸಾದಗಳನ್ನಾದರೂ ತೆಗೆದುಕೊಳ್ಳಕೂಡದು ಆ ಪರಶಿವನ ಪರಿಶುದ್ಧವಾದ ತೀರ್ಥಪ್ರಸಾದಗಳಾದರೂ ಯಾವನು ಶಿವದೀಕ್ಷಾ ಪ್ರಭಾವದಿಂದ ಪ್ರಾರಬ್ಧಸಂಚಿತಾಗಾಮಿಮುನ್ತಾದ ಕರ್ಮ ಜಾಲವನ್ನು ಕಳೆದುಕೊಂಡು ಕೇವಲ ಶಿವಭಕ್ತನಾಗಿ ಅತ್ಯಂತ ಪರಿಶುದ್ಧನಾಗಿ ಇರುವನೋ ಅವನಿಗೆ ಮಾತ್ರ ಅವುಗಳು ಯೋಗ್ಯಗಳಾಗಿರುವವು ಇದೇ ಅರ್ಥವನ್ನೇ ಶಿವಧರ್ಮೋತ್ತರದಲ್ಲಿ–ಶುದ್ಧವಸ್ತೂಪಭೋಗೇ ಹಿ ಶುದ್ಧಾ ಏವಾಧಿಕಾರಿಣಃ ॥ ಎಂಬೀ ಸೂತ್ರವು ದೃಢೀಕರಿಸುತ್ತಿಹುದು ಆದು ಕಾರಣ ಯಲೈರಾಮನೆ ನೀನು ಹಲವುಹಂಬಲಗಳನ್ನೆಲ್ಲಾ ಬಿಟ್ಟು ಶಿವದೀಕ್ಷಾ ಸಂಸ್ಕಾರವನ್ನು ಹೊಂದು ನಿನಗೆ ಶಿವದೀಕ್ಷಾಸಂಸ್ಕಾರವನ್ನು ಮಾಡಿಸುತ್ತೇನೆ. ಆ ಶಿವದೀಕ್ಷೆಯಿಂದ ನೀನು ಪರಿಶುದ್ಧವಾದ ಶಿವನ ತೀರ್ಥಪ್ರಸಾದಗಳಿಗೂ ಶಿವಪೂಜೆಗೂ ಅರ್ಹನಾಗಿ ಜೀವಭಾವವಂ ಬಿಟ್ಟು ತೇಜೋಮಯನಾಗುತ್ತೀ ಇಂಥ ಶೀವದೀಕ್ಷೆಯಿಂದ ನೀನು ಯುದ್ಧದಲ್ಲಿ ಶತೃವಂ ಸಂಹರಿಸಿ ಸರ್ವಾಭೀಷ್ಟಗಳಂ ಪಡೆದು ಭೂಮಂಡಲಾಧಿಪತ್ಯವನ್ನನುಭವಿಸಿ ಅಂತ್ಯದಲ್ಲಿ ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಪೊಂದುವಿಯೆಂದು ಹೇಳಲು

ಆಗ ಶ್ರೀರಾಮನು ಮುನಿಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ–ಕೃತಾರ್ಥೋಽಹಂ ಮುನೇ ಜಾತೋಽವಾಂ ಛಿತಾರ್ಥೋಽಮವಾಗತಃ ॥ ಪೀತಾಂಬುಧಿಃ ಪ್ರಸನ್ನಸ್ತ್ವಯ ದಿಮೇಕಿಮು ದುರ್ಲಭಂ ॥ ಅತಸ್ತ್ವ ವಿರಜಾಂ ದೀಕ್ಷಾಂ ಬ್ರೂಹೀಮೇ ಮುನಿ ಸತ್ತಮಾ ॥ ಅಂದರೆ ಯಲೈ ಮುನೀಶ್ವರನೆ ನಾನು ಕೃತಾರ್ಥನಾದೆನು ನನ್ನ ಇಷ್ಟಾರ್ಥವು ಲಭಿಸಿತು ಸಮುದ್ರವನ್ನೇ ಪಾನಮಾಡಿ ಬಿಡುವಂಥಾ ಮಹಾಮಹಿಮೆಯುಳ್ಳ ನೀನು ನನ್ನಲ್ಲಿ ಪ್ರಸನ್ನನಾದರೆ ನನಗೇನು ದುರ್ಲಭವು ಯಲೈಮುನಿ ಪುಂಗವಾ ನನಗೆ ಶಿವದೀಕ್ಷಾ ಸಂಸ್ಕಾರವನ್ನು ನೀನು ಕೊಡು ಎಂದು ಕೇಳಿಕೊಳ್ಳಲು ಆಗ ಮುನೀಶ್ವರನಾದರೂ ಸಕಲ ತತ್ವಾರ್ಥ ಬಲ್ಲವನಾದುದರಿಂದ ಒಳ್ಳೇ ಮೂಹರ್ತವನ್ನು ನೋಡಿ ಶ್ರೀರಾಮನಿಗೆ ವೇದಾಗಮ ಶಾಸ್ತ್ರ ಪದ್ಧತಿ ಪ್ರಕಾರ ಭಸ್ಮರುದ್ರಾಕ್ಷಗಳಂ ಧರಿಸಿ ಶಿವದೀಕ್ಷಾ ಸಂಸ್ಕಾರವನ್ನು ಮಾಡಿ ಶಿವ ಪಂಚಾಕ್ಷರೀ ಮಂತ್ರವನ್ನುಪದೇಶಿಸಿ ದೇಹಾದಿ ಬುದ್ಧಿಯಂ ನೆರೆಗಳೆದು ವೇದಸಹಸ್ರ ಶಿವನಾಮಾವಳಿಯನ್ನು ಹೇಳಿಕೊಟ್ಟು ಎಲೇ ಭಾಗ್ಯವಂತನೇ ಇನ್ನುಮೇಲೆ ನೀನು ಶಿವನನ್ನು ಕುರಿತು ಹೀಗೆ ತಪಸ್ಸನ್ನು ಮಾಡು ಅದರಿಂದ ಶಿವನು ನಿನಗೆ ಪ್ರಸನ್ನನಾಗುತ್ತಾನೆ ನಿನಗೆ·ಮಹಾ ಪಾಶುಪತಾಸ್ತ್ರವನ್ನು ಬೇಡಿದಿಷ್ಟಾರ್ಥಗಳನ್ನು ಕೊಡುತ್ತಾನೆ. ಶತ್ರುಗಳಂ ಸಂಹರಿಸಿ ಭಾರ್ಯೆಯನ್ನು ಹೊಂದುತ್ತೀ ಹೋಗು ಎಂದು ಕಳುಹಿಕೊಟ್ಟನು ಆಗ ಶ್ರೀರಾಮಚಂದ್ರನು ಮುನಿ ಉಪದೇಶಿಸಿದ ಪ್ರಕಾರ ಗೋದಾವರೀ ನದೀತೀರದಲ್ಲಿ ತಪಸ್ಸನ್ನೆಸಗಿ ಈಶ್ವರನನ್ನು ಪ್ರಸನ್ನನನ್ನಾಗಿ ಮಾಡಿಕೊಂಡು ಆತನಿಂದ ಪಾಶುಪತಾಸ್ತ್ರವನ್ನು ಶತೃಜಯವನ್ನು ಹೆಂಡತಿಯನ್ನು ಮಹಾತತ್ವಾರ್ಥವನ್ನು ಮುಕ್ತಿಯನ್ನು ಪಡೆದನು ಈ ಮಹಾ ಸತ್ಕಥೆಯು ಪದ್ಮಪುರಾಣಾಂತರ್ಗತವಾದ ಶ್ರೀ ಶಿವಗೀತೆಯಲ್ಲಿ ಸುಪ್ರಸಿದ್ಧವಾಗಿದೆ.

ಮುಕ್ತಿಗೆ ಜ್ಞಾನವೇ ಕಾರಣವಲ್ಲದೆ ಕರ್ಮ ಕಾರಣವಲ್ಲವೆಂದು ವೇದಗಳಲ್ಲಿ ಹೇಳಲ್ಪಟ್ಟಿರುವಾಗ ಇಲ್ಲಿ ಶಿವದೀಕ್ಷಾ ಕರ್ಮಕ್ಕೆ ಇಷ್ಟೊಂದು ಆಧಿಕ್ಯವನ್ನು ಹೇಳಲು ಕಾರಣವೇನೆಂಬ ಅನುಮಾನಕ್ಕೆ–ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾ ಕ್ರಿಯಾ ॥ ಅಪಸ್ಯನ್ನಂಧ ಕೋದಗ್ಧೋ ಗಚ್ಛನ್ಪಂಗುಶ್ಚದಹ್ಯತೇ " ಯಂದರೆ ಉರಿಯು ಆವರಿಸಿಕೊಂಡು ಸುಡುವದಕ್ಕೆ ಬರುತ್ತಿರುವಾಗ ಕಣ್ಣಿಲ್ಲದ ಕುರುಡನೂ ಸುಟ್ಟು ಬೂದಿಯಾಗಿ ಹೋಗುತ್ತಾನೆ ಕಣ್ಣುಗಳುಚೆನ್ನಾಗಿ ಕಾಣಿಸುತ್ತಿದ್ದರೂ ಕಾಲಿಲ್ಲದ ಹೆಳವನೂ ಕೂಡಾ ಸುಟ್ಟು ಬೂದಿಯಾಗಿ ಹೋಗುತ್ತಾನೆ. ಅವರಿಬ್ಬರೂ ಕೂಡಿಕೊಂಡಿದ್ದರೆ ಅವರಿಬ್ಬರಿಗೂ ಪರಿಣಾಮವಾಗುತ್ತಿದೆ ತದ್ವತ್ತ ಜ್ಞಾನವಿಲ್ಲದ ಕರ್ಮಕ್ಕಾಗಲಿ ಕರ್ಮವಿಲ್ಲದ ಜ್ಞಾನಕ್ಕಾಗಲಿ ಪರಿಣಾಮವೇ ಇಲ್ಲ ಆನೆರಡೂ ಕೂಡಿ ಕೊಂಡಿದ್ದರೇನ ಆವೆರಡಕ್ಕೂ

ಪರಿಣಾಮವಾಗುತ್ತಿದೆ ಆ ಕರ್ಮ ಜ್ಞಾನಗಳೆರಡೂ ಈ ಮೋಕ್ಷಕ್ಕೆ ಮುಖ್ಯ ಪ್ರಧಾನಗಳಾಗಿರುವವು ಶಾಖ್ಯವಾದ ವೇದೋಕ್ತ ಕರ್ಮಾಚರಣೆಯನ್ನು ಪರಿತ್ಯಾಗಮಾಡಿದವರಲ್ಲಿ ಬ್ರಹ್ಮಜ್ಞಾನವು ಸಂಪೂರ್ಣವಾಗಿ ಇದ್ದಾಗ್ಯಾದರೂ ಅದು ದುಷ್ಟ ಚಾಂಡಾಲನ ಭಾಂಡದಲ್ಲಿದ್ದ ಬಾಗೀರಥ ಜಲವು ಹೇಗೆ ನಿಷ್ಪ್ರಯೋಜನವಾದುದೋ ಹಾಗೆ ಅದು ನಿಷ್ಪ್ರಯೋಜನವಾದುದು ಇದೇ ಅಭಿಪ್ರಾಯವನ್ನು ...ಜ್ಞಾನಾಚಾರವಿಹೀನೆ ನ ಸರ್ವ ವಿದ್ಯಾಸಮನ್ವಿತಂ । ದುಷ್ಟ ಚಂಡಾಲ ಭಾಂಡೇಷು ಭಾಗೀರಥಿ ಜಲಂ ಯಥಾ ॥...ಎಂಬೀ ಶ್ಲೋಕದಿಂದ ಹೇಳಲ್ಪಟ್ಟಿರುವದು ಅದು ಕಾರಣ ವಿಹಿತವಾದ ಈ ಶಿವದೀಕ್ಷಾ ಕರ್ಮಕ್ಕೆ ಇಷ್ಟೊಂದು ಅಧಿಕ್ಯವನ್ನು ಹೇಳಬೇಕಾಯಿತು ನ ಕರ್ಮಣಾ...ಯೆಂಬ ವೇದವಚನವಾದರೂ ಈ ನೀಚವಾದ ತಬ್ಬಲಿ ಕರ್ಮಗಳನ್ನಾಚರಿಸುವವರು ಮೋಕ್ಷಕ್ಕೆ ಅನಧಿಕಾರಿಗಳೆಂದು ಹೇಳುತ್ತಿರುವದೇ ಹೊರ್ತು ವೇದಾಗಮೋಪನಿಷದಾದಿ ಶಾಸ್ತ್ರ ಸಮ್ಮತವಾದ ಸತ್ಕರ್ಮಂಗಳನ್ನಾಚರಿಸುವವರು ಮೋಕ್ಷಕ್ಕೆ ಅನಧಿಕಾರಿಗಳೆಂದೇನು ಹೇಳುವದಿಲ್ಲ ಈ ಶಿವದೀಕ್ಷಾ ಕರ್ಮವಾದರೂ ಯಾವಾಗಲೂ ಶಿವತತ್ವದ ಮಹತ್ವಕ್ಕೆ ಆಶ್ರಯವಾಗಿ ಮರೆಯುತ್ತಿರುವುದು.

ಮತ್ತು ಅದೇ ಅಗಸ್ತ್ಯಮಹರ್ಷಿಗಳೂ ಬ್ರಹ್ಮರ್ಷಿಗಳೂ ಇನ್ನೂ ಅನೇಕದೊಡ್ಡ ದೊಡ್ಡ ರಾಜರುಗಳೂ ಇವರೆಲ್ಲರೂ ಸಹ ಆ ಶಿವದೀಕ್ಷಾ ಸಂಸ್ಕಾರ ಪ್ರಭಾವದಿಂದಲೇ ಸಕಲ ಸುಖಭೋಗ ಯೋಗಜ್ಞಾನ ಮೋಕ್ಷಾದಿಗಳೆಲ್ಲವನ್ನು ಪಡೆದುಕೊಂಡು ಜಗತ್ತಿನಲ್ಲಿ ಕೀರ್ತಿಮಯರಾಗಿ ರಾರಾಜಿಸುತ್ತಿರುವರೆಂಬುದನ್ನು ಈ ಶಾಸ್ತ್ರಪುರಾಣೆತಿಹಾಸಾದಿಗಳೇ ಕೈಯೆತ್ತಿ ಕೂಗಿ ಹೇಳುತ್ತಲಿವೆ ಈ ಮಾತಿನಲ್ಲಿ ಸಂಶಯವಿಲ್ಲ ಇಂಥಾ ಮಹತ್ತರವಾದ ಆ ಶಿವದೀಕ್ಷೆಯನ್ನು ಬಿಟ್ಟರೆ ಶಿವಪೂಜಾಧಿಕಾರವನ್ನು ಶಿವನ ತೀರ್ಥ ಪ್ರಸಾದಗಳನ್ನು ಮೋಕ್ಷವನ್ನು ಪಡೆಯುವದಕ್ಕೆ ಬೇರೆ ಉಪಾಯವೇ ಇಲ್ಲ ಘನತರವಾದ ಈ ಶಿವದೀಕ್ಷೆ ಇಲ್ಲದೆ ಸುಮ್ಮನೆ ಶಿವಪೂಜಾಧಿಕಾರವನ್ನು ಶಿವನ ತೀರ್ಥ ಪ್ರಸಾದಗಳನ್ನು ಮೋಕ್ಷವನ್ನು ಪಡೆಯುತ್ತೇನೆಂದರೆ ಅವು ಸಂತೆಯಲ್ಲಿ ಮಾರಲಿಕ್ಕೆ ಬಂದ ಕೊಳತ್ತುಹೋದ ಉಳ್ಳೀಗೆಡ್ಡೆಗಳಲ್ಲ ಅವೆಲ್ಲಾ ಶಿವದೀಕ್ಷಾವಂತರಿಗೇನೆ ಸುಸಾಧ್ಯವಾಗಿರುವವು

ಹೀಗಿದ್ದರೂ ಈ ನಮ್ಮ ವೀರಶೈವ ಬ್ರಾಹ್ಮಣ ಮತದಲ್ಲಿ ಕೆಲವರು ಅದೀಕ್ಷಿತರಾದ ಪಾಷಾಣಲಿಂಗಧಾರಿಗಳು ಈ ವೇದಾಗಮಂಗಳಲ್ಲಿ ಸುಪ್ರಸಿದ್ಧವಾಗಿರುವ ಈ ಶಿವದೀಕ್ಷಾ ಸಂಸ್ಕಾರವನ್ನು ಹೊಂದಬೇಕೆಂಬ ವಿಧಿಯನ್ನು ನಾವುಗಳು ಅನುಸರಿಸಿ ನಡಿಯಬೇಕಾದುದೇನು ಅವಸ್ಯವಿಲ್ಲ. ಜನನ ಕಾಲದಲ್ಲಿ ಹಿರೇಮಠದಯ್ಯನು ಮನೆಗೆ ಬಂದು ಲಲಾಟದಲ್ಲಿ ವಿಭೂತಿಯನ್ನಿಕ್ಕಿ ಲಿಂಗವಂ ಕೊಟ್ಟು

ಪಾಯಸಾನ್ನವಂ ಭಕ್ಷಿಸಿ ಧಕ್ಷಿಣಾತಿಗೆಮುಕೊಂಡು ಹೋಗಿರುವದೆ ದೀಕ್ಷೆಯು ಆ
ತನು ಕೊಟ್ಟಂಥಾ ಲಿಂಗವು ಸದಾ ಅಂಗದಮೇಲಿದ್ದರೆ ಸಾಕು ಅದರಿಂದ ಶಿವಪೂ
ಜಾರ್ಹತೆಯೂ ಗುರುಲಿಂಗಜಂಗಮರ ಪಾದೋದಕ ಪ್ರಸಾದಗಳನ್ನು ಸೇವಿಸುವಅಧಿ
ಕಾರವು ಪಾತ್ರತ್ವವು ಸಹಿತಾ ನಾಗಿಬಂದು ಹೋಗಿರುತ್ತೆ ಹಾಗೆಯಂದು ತಮ್ಮೊಳಗೆ ತಾವು
ತಿಳಿದುಕೊಂಡು ಶಿವಾಜ್ಞಾರೂಪವಾದ ವೈದಿಕ ದೀಕ್ಷಾಕರ್ಮವನ್ನಂಗೀಕರಿಸದೆ
ತಿರಸ್ಕರಿಸಿ ಬಿಟ್ಟುಕೊಟ್ಟಿದ್ದಾರೆ. ಆವರೆ ಕುಮಾರ್ಗಾಚಾರ ವರ್ತಿಗಳಾದ ಈ
ವಿಕ್ಷಿಪ್ತ ಜನರ ಅಭಿಪ್ರಾಯವು ಕೇವಲ ಚಾಪಲ್ಯವಾಗಿಯೂ ಶುದ್ಧ ಅಸಂಗತ
ವಾಗಿಯೂ ಅಶಾಸ್ತ್ರೀಯವಾಗಿಯೂ ಪಾಪಕ್ಕೆ ಮೂಲಭೂತವಾಗಿಯೂ ಇರು
ವದೇ ಹೊರತು ಇನಿತಾದರೂ ಈ ನಮ್ಮ ವೀರಶೈವ ಧರ್ಮಕ್ಕೆ ಸಮಂಜಸವಾ
ಗಿರುವದಿಲ್ಲ ಅದು ಹೇಗಂದರೆ ಜನನಕಾಲದಲ್ಲಿ ಕುಂಡಮಂಟಪ ಹೋಮಾದಿ
ಗಳು ಷಡಧ್ವ ಶೋಧನಾದಿಗಳೂ ಇಲ್ಲದೆ ಲಿಂಗಧಾರಣವನ್ನು ಮಾಡಲ್ಪಟ್ಟಿ
ರುತ್ತೆ ಇದಲ್ಲದೆ ಜನನವಾದ ಶಿಶುವಿನಲ್ಲಿ ದೀಕ್ಷಾ ಹೊಂದಿದ ಗುರ್ತು ಅಂದರೆ
ಇದು ನನ್ನ ಗುರುಕೊಟ್ಟ ಇಷ್ಟಲಿಂಗವು ಈ ಲಿಂಗವನ್ನು ಸದಾ ನನ್ನ ಅಂಗದ
ಮೇಲೆ ನಿಯತವ್ರತದಿಂದ ಧರಿಸಬೇಕು. ಶಿವನ ಪೆಸರಾದ ಪಂಚಾಕ್ಷರೀಮಂತ್ರ
ವನ್ನು ಪಠಿಸಬೇಕು ತತ್ತನ್ಮಂತ್ರಗಳಿಂದ ವಿಭೂತಿ ಧಾರಣವನ್ನು ಗೈಯ್ಯಬೇಕು
ನನ್ನ ಗುರುವರ್ಯನು ಹೇಳಿಕೊಟ್ಟಂತೆ ತ್ರಿಸಂಧ್ಯಗಳಲ್ಲಿ ಶಿವಪೂಜಾಕರ್ಮವ
ನ್ನು ತಪ್ಪದ ಹಾಂಗೆ ಆಚರಿಸಬೇಕು ಕ್ಲುಪ್ತವಾಗಿ ಶೌಚಾಚಮಾನಗಳನ್ನು
ಮಾಡಬೇಕು ಹೀಗೆ ನಡಿಯಬೇಕು. ಯಂಬ ಸರಿಜ್ಞಾನವಾದರೂ ಇರುವದಿಲ್ಲ
ಮತ್ತು ಲಿಂಗಾರ್ಪಿತವಲ್ಲದ ಯಾವದೊಂದನೂ ಸೇವಿಸಕೂಡದೆಂಬ ತಿಳವಳಿಕೆ
ಯಾದರೂ ಇರುವದಿಲ್ಲ ಆದುದರಿಂದ ಜನನ ಕಾಲದಲ್ಲಿ ಹಿರೇಮಠದಯ್ಯನು
ಮನಿಗೆ ಬಂದು ಸುಮ್ಮನೆಲಿಂಗವನ್ನು ಕೊಟ್ಟು ಹೋಗಿರುವದು ಪುರಾತನ ವಿ
ಧಿಗನುಸರಿಸಿದ ಶಿವದೀಕ್ಷಾ ಸಂಸ್ಕಾರ ವೆನಿಸಿ ಕೊಳ್ಳಲಾರದು ಒಂದು ವೇಳೆ ಅ
ದಾದರೂ ಪುರಾತನ ವಿಧಿಗನುಸರಿಸಿದ ಶಿವದೀಕ್ಷಾ ಸಂಸ್ಕಾರವೇ ಹೌದೆಂದು
ಅಜ್ಞತ್ವದಿಂ ತಿಳಿದುಕೊಂಡದ್ದಾದರೆ-ಕುಂಡ ಮಂಟಪ ಹೊಮಾದ್ಯೈರ್ನ್ಯಾಸೈ
ಅಧ್ವಕಾಲಾದಿಭಿಃ॥ ಮಂತ್ರೋಪದೇಶ ಸಹಿತಾ ಕ್ರಿಯಾದೀಕ್ಷೇತಿ ಕಥ್ಯತೆ,, ಇತ್ಯಾ
ದ್ಯಾಗಮೋಕ್ತಿಗಳನ್ನು ಹಾಳ್ಮಾಡಿದ ದೋಷಕ್ಕೆ ಗುರಿಯಾಗಬೇಕಾಗುತ್ತೆ ಆದ್ದ
ರಿಂದ ಜನನ ಕಾಲದಲ್ಲಿ ಕುಂಡಮಂಟಪ ಹೋಮಾದಿಗಳು ಷಡಧ್ವಶೋಧನಾ
ದಿಗಳು ಇಲ್ಲದೆ ಮಾಡಿದ ಲಿಂಗಧಾರಣವು ನಿಗಮಾಗಮ ವಿಧಿಗನುಸರಿಶಿದ
ಶಿವದೀಕ್ಷಾ ಸಂಸ್ಕಾರವೆನಿಸಿಕೊಳ್ಳಲಾರದು ಸದ್ಯಕ್ಕೆ ಜನನ ಕಾಲದಲ್ಲಿ ಉಂ
ಟಾದ ಸೂತಕಾದಿ ದೋಷವನ್ನು ಪೋಗೊಳಿಸುವದಕೋಸ್ಕರ ಸುಮ್ಮನೆ ಲಿಂ
ಗಧಾರಣವನ್ನು ಮಾಡಿದ್ದು ಸಾಮಾನ್ಯ ಲಿಂಗಧಾರಣವೆನಿಸಿಕೊಳ್ಳಲ್ಪಡುತ್ತೆ
ಅಂಥಾ ಸಾಮಾನ್ಯ ಲಿಂಗಧಾರಿಗಳಿಗೆ ಶಿವಪೂಜಾರ್ಹತೆಯೂ ಗುರಲಿಂಗ ಜಂಗ

ಮರ ಪಾದೋದಕ ಪ್ರಸಾದಗಳನ್ನು ಸೇವಿಸುವ ಅಧಿಕಾರವೂ ಶುಚಿತ್ವವೂ ಪಾತ್ರತ್ವವೂ ಸಹಖಂಡಿತವಾಗಿರುವದಿಲ್ಲವೆಂದು ಈ ಕೆಳಗೆ ಉದಾಹರಿಸಿರುವ ಪ್ರಮಾಣಗಳಮೇಲಿಂದ ವ್ಯಕ್ತವಾಗುವದುಸುಪ್ರ ಭೇದಾಗಮದಲ್ಲಿ-ಅದೀಕ್ಷಿತ್ಸೈರ ನಾಚಾರ್ಯೈರಮಂತ್ರಜ್ಞೈರಪ್ಯದಿಕ್ಯೈಃ। ದೂಷಕ್ರೈ ಸಮಯ × ಭ್ರಷ್ಟೈರ್ನಕಾರ್ಯಂ ಶಿವಪೂಜನಂ, ಯಂತಲೂ ಸ್ಕಾಂದ ಫರಾ॰ದಲ್ಲಿ-ಜಪ್ಪಾಚಾಪಲ ಸಂಯುಕ್ತಶ್ಶೈವ ಸಂಸ್ಕಾರ ವರ್ಜಿತಃ। ಶಿವನಿರ್ಮಾಲ್ಯ ಭೋಜೀಚೇ ದ್ರೌರವಂ ನರಕಂ ವ್ರಜೇತ್...... ಯಂತಲೂ ಪಂಡಿತಾರಾಧ್ಯರಚರಿತ್ರೆಯಲ್ಲಿ-ಅಶುದ್ಧಾನಾಂ ಶುದ್ಧವಸ್ತು ಭೋಗೋದೋಷಾಯ ಸರ್ವದಾ। ಭವತೀತ್ಯಯ ಮೇವಾರ್ಥ ಶೃತಿ ಸ್ಮೃತಿಷುಕಥ್ಯತೆ......... ಯಂತಲೂ ಹೇಳಲ್ಪಟ್ಟಿರುವದು ಇ ಪ್ರಮಾಣಗಳೆಲ್ಲಾ ಅದೀಕ್ಷಿತರು ಯೆಷ್ಟು ಲಿಂಗಪೂಜೆಯನ್ನು ಮಾಡಿದರೂ ಗುರುಲಿಂಗ ಜಂಗಮರ ಪಾದೋದಕ ಪ್ರಸಾದಗಳನ್ನು ಯಷ್ಟು ಸೇವಿಸಿದರೂ ಅದೆಲ್ಲವೂ ವಿಫಲವಾಗಿ ಹೋಗಿ ಕಡೆಗೆ ನರಕಪ್ರಾಪ್ತಿಯಾಗುವದಲ್ಲದೆ ಅದರಿಂದ ಫಲವೂ ಲೇಶವೂ ಒಂದಂಶಮಾತ್ರವೂ ಆಗಲರಿಯದೆಂಬ ಅರ್ಥವನ್ನೇ ಕೊಡುತ್ತಿರುವವು

ಮತ್ತು- ಏಕೇನ ಜನ್ಮನಾ ಮುಕ್ತಿ ರ್ವೀರಾಣಾಂತು ಮಹೇಶ್ವರಿ-...... ಯಂಬ ಶಿವೋಕ್ತಿಯಾದರೂ ನಿಗಮಾಗಮಂಗಳಲ್ಲತಿ ಪ್ರಚುರತರವಾದ ಕ್ರಿಯಾದೀಕ್ಷೆಯಿಂದ ನಿಖಿಳ ಪಾಪಸಮುದಾಯವನ್ನು ಕಳೆದುಕೊಂಡು ಶಿವಾಧಿಕ್ಯಜ್ಞಾನಪ್ರವಿಷ್ಟರಾದ ವೀರಶೈವರಿಗೆ ಮಾತ್ರ ಒಂದು ಜನ್ಮದಲ್ಲಿ ಮುಕ್ತಿಲಾಭಉಂಟಾಗುತ್ತೆ ಯಂಬ ಅರ್ಥವನ್ನು ಕೊಡುತ್ತಿರುವದಲ್ಲದೆ ಶಿವದೀಕ್ಷಾ ಸಂಸ್ಕಾರ ಹೀನರಾದ ಪಾಷಾಣಲಿಂಗ ಧಾರಿಗಳಿಗೊಂದು ಜನ್ಮದಲ್ಲಿ ಮುಕ್ತಿಲಾಭ ಉಂಟಾಗುತ್ತೆ ಯಂಬ ಅರ್ಥವನ್ನೇನು ಅದು ಸ್ಪಷ್ಟವಾಗಿ ಕೊಡುವದಿಲ್ಲ ಆದುದರಿಂದ ಶಿವದೀಕ್ಷಾ ಹೀನರಾದ ಮುದಿಗೊಡ್ಡು ಗಳಗೊಂದು ಜನ್ಮದಲ್ಲಿ ಮುಕ್ತಿಯೂ ಸಹ ಇಲ್ಲವೆಂದು ವೀರಶೈವ ಸಿದ್ಧಾಂತರೀತ್ಯಾಸ್ಪಷ್ಟವಾಗಿ ತೋರಿಬರುತ್ತಿದೆ.

ಗುರುರೇ ಕೋಲಿಂಗಮೇಕಂ ದೀಕ್ಷಾಚೈಕಾ ಪ್ರಸಾದಕಂ॥

ಏಕಾಮುಕ್ತಿ ರಿಯಂದೇವಿ ಶೈವದೀಕ್ಷಾ ವಿಶಿಷ್ಯತೆ...... ಯಂಬೀಪ್ರಮಾಣಾನುಸಾರವಾಗಿ ಶಿವದೀಕ್ಷಾಕರ್ಮವನ್ನು ಪ್ರತಿಒಬ್ಬ ಲಿಂಗಧಾರಿಯು ತಮ್ಮ ಪೂರ್ವಪ ಗುರುಗಳ ಪರಿಮುಖದಿಂದಲೇ ಹೊಂದಬೇಕು ಇಂಥ ಶಿವದೀಕ್ಷೆಯೇ ಪ್ರಶಸ್ತವಾದದ್ದು ಆ ತಮ್ಮ ಪೂರ್ವದ ಗುರುಗಳನ್ನು ಬಿಟ್ಟು ಬೇರೆಗುರುಗಳಿಂದ ಹೊಂದಲಾಗದು ಹೊಂದಿದ್ದಾದರೆ ಅದರಿಂದ ಕೀರ್ತಿ ಬಲೈಶ್ವರ್ಯಾದಿಗಳೆಲ್ಲಾ ಕೆಟ್ಟು ಹೋಗಿ ವಿಶೇಷ ಪಾತಕ ಉಂಟಾಗುವದು ಈ ಪ್ರಕಾರವಾಗಿ ಹೇಳಲ್ಪಟ್ಟ ತಾತ್ಪರ್ಯಾರ್ಥವನ್ನೇ ವೀರಾಗಮದಲ್ಲಿ- ಪತಿಪತ್ನೋರನ್ಯ

ಗುರುರ್ದೀಕ್ಷಾ ಚಾನ್ಯ ಭವೇದ್ಯದಿ ॥ ಭ್ರಾತೃಭೃತ್ಯ ಸುತಾನಾಂಚ ಭಕ್ತಿಹೀನಂ ತು ಶಾಂಕರಿ- ಎಂಬ ಶ್ಲೋಕದಿಂದಲೂ- ಯಥಾದೀಕ್ಷಾ ದ್ವಿಧಾ ಚೈವ ಪ್ರಸಾದೋಪ್ಯಿವಿಧಂ ಭವೇತ್ ॥ ಯಥಾ ಪ್ವಯಮಿದಂ ದೇವಿ ವಿಶೇಷಃ ಪಾತಕೋಭವೇತ ॥... ಎಂಬ ಶ್ಲೋಕದಿಂದಲೂ ಹೇಳಲ್ಪಟ್ಟಿರುವದು ಈ ನಮ್ಮ ಧರ್ಮಶಾಸ್ತ್ರದ ನಿಜವಾದ ಗುಟ್ಟು ಹೀಗಿದ್ದರೂ ಅದೀಕ್ಷಿತರಾದ ಈ ಪಾಷಾಣ ಲಿಂಗಧಾರಿಗಳು ಪುರಾತನ ವಿಧಿಗನುಸರಿಸಿದ ಶಿವದೀಕ್ಷಾ ಸಂಸ್ಕಾರವು ನಮಗೇಕೆ ಆದರ ಸುದ್ದಿ ನಮಗೇಕೆ ಹುಟ್ಟಿ ಭೂಮಿಯಮೇಲೆ ಬೋರ್ಲು ಬಿದ್ದಾಗಳೇ ಎಲ್ಲಾ ಸಂಸ್ಕಾರಗಳನ್ನು ನಮಗೆ ಹಿರೇಮಠದಯ್ಯನು ಬಂದುಮಾಡಿಹೋಗಿರುತ್ತಾನೆ ಅದರಿಂದ ನಾವು ಈ ಶಿವಾರ್ಚನೆಗೂ ಈ ಗುರುಜಂಗಮರ ತೀರ್ಥ ಪ್ರಸಾದಗಳಿಗೂ ಅರ್ಹರಾಗಿರುತ್ತೇವೆ. ಇ ಹಿರೇಮಠದಯ್ಯನವರಿಗೂ ಆ ನಮ್ಮ ಪೂರ್ವದ ಗುರುಗಳಿಗೂ ಏನೂ ಭೇದವಿಲ್ಲ ಅವರಿಬ್ಬರೂ ನಮಗೆ ಗುರುಗಳೇ ಆಗಬೇಕು ಹಾಗೆ ಯಂದು ಯಚ್ಚರ ತಪ್ಪಿ ದೊಡ್ಡರೋಗಬಂದವರಹಾಗೆ ಮಾತನಾಡುತ್ತಲಿದ್ದಾರೆ ಇಂಥಾ ಕೆಟ್ಟ ದುರಾಚಾರಿಗಳಾದ ಗರ್ವಿಷ್ಠರುಗಳಾದ ಪಾಪಿಷ್ಠ ಜನರ ಮಾತನ್ನು ಶಿವಾದ್ವೈತಜ್ಞಾನಿಗಳೊಪ್ಪಬಹುದೆ ಕೆಟ್ಟದು ಮಾರ್ಗ ಪ್ರವಿಷ್ಠರಾದ ಈ ಖೂಳರಿಗೆ ಮುಂದೆ ಜ್ಞಾನವೂ ಮೋಕ್ಷವೂ ಪ್ರಾಪ್ತವಾಗುವ ಮಾತು ಹಾಗಿರಲಿ ಸದ್ಯಕ್ಕೆ ವೇದಾಗಮಾಭಿಜ್ಞರಾದ ಗುರು ಜಂಗಮರ ಉಚ್ಚಿಯಾದರೂ ಇವರಿಗೆ ಇಷ್ಟು ಸಿಕ್ಕುವವೆ ಘನತರವಾದ ವೀರಶೈವ ಮತ ಸ್ವರಂವವನ್ನು ಆಚಾರವನ್ನು ತಿಳಿಯದೆ ಏನೇನೋ ಸುದ್ದಿಗಳನು, ಹರಟುವದಕ್ಕೆ ಬರುತ್ತಾರೆ ಈ ಕತ್ತೀ ಮಕ್ಕಳಿಗೆ ಸ್ವಧರ್ಮಾ ಚರಣೆ ವಿಷಯವೇ ಗೊತ್ತಿಲ್ಲ.

ಇದಲ್ಲದೆ ಮತ್ತೆ ಕೆಲವರು ಲಿಂಗಧಾರಿಗಳಾದ ಶಿವಭಕ್ತರು ಮದುವೆ ಗಂಡನಗಿಂತಲೂ ಮೋಹದ ಮಿಂಡನೇ ಬಹಳ ದೊಡ್ಡಾತನೆಂದು ತಿಳಿದು ಕೊಂಡಿರುವ ಕೆಟ್ಟ ಹಾದರಗಿತ್ತಿಯನ್ತೆ ಭೂವಿತ್ತವಾಹನ ಮೊದಲಾದ ಲೌಕಿಕ ವಸ್ತುಗಳನ್ನಾರ್ಜಿಸುವ ನಿಮಿತ್ಯವಾಗಿ ಬಹು ಭಾಷೆಗಳನ್ನು ಗಲಿತು ನಾನಾವಿಧ ವೇಷಗಳಂಧರಿಸಿರುವ ಡಾಂಭೀಕ ಜನರನ್ನೆಲ್ಲಾ ತಮ್ಮ ಪೂರ್ವದ ಗುಗುಗಳಿಗಿಂತಲೂ ಬಹಳ ದೊಡ್ಡ ಗುರುಗಳೆಂದು ಭಾವಿಸಿ ನಯವಿನಯ ಭಯಭಕ್ತ್ಯಾದ್ಯುಪಚಾರಗಳೀಂದವರ ಮುಂಗಾಲ್ಗಳನ್ನು ಪೂಜಿಸಿ ಬಳಿಕವರ ಪರಿಮುಖದಿಂದಲೇ ಉಪದೇಶಾಶೀರ್ವಾದಗಳನ್ನು ಪಡೆದುಕೊಂಡು ಚಿತ್ತಕ್ಕೆ ಬ್ರಹ್ಮನರಿವು ಗೊತ್ತಿಲ್ಲದಿದ್ದರೂ ಸಹಜ ಪರಿತುಷ್ಟಿಪಡೆದಿರ್ಪ ಮಹಾನುಭಾವರ ಹಾಗೆ ನಟಿಸುತ್ತಲಿದ್ದಾರೆ. ಆದರೆ ವಿಚಾರ ದೃಷ್ಟಿಯಿಂದ ನೋಡಲು ಈ ಪಾಮರ ಜನರ ನಡವಳಿಕೆಯಾದರೂ ಅತ್ಯಂತ ದುರ್ಗತಿಗೆ ಕಾರಣವಾಗಿರುವವಲ್ಲದೆ ಈ ನಮ್ಮವರ ವೀರಶೈವಸಿದ್ಧಾಂತಾರ್ಥವನ್ನು ಬಲ್ಲ ಪಂಡಿತರಚಿತ್ತಕ್ಕಾ

ವೆರೊ ಬಹು ಬೇಸರವನ್ನುಂಟುಮಾಡತಕ್ಕವುಗಳಾಗಿವೆ ಕಾರಣವೇನಂದರೆ ಮೊದಲೊಬ್ಬ ಗಂಡನನ್ನು ಮಾಡಿಕೊಂಡಿದ್ದವಳು ಬೇರೊಬ್ಬಗಂಡನನ್ನು ಮಾಡಿಕೊಳ್ಳುವದಕ್ಕೆ ಶಿವಾಗಮಗಳಿಗೆ ಹೇಗೆ ಸಮ್ಮತಿ ಇಲ್ಲವೋ ಹಾಗೆ ಶಿಷ್ಯರು ತಮ್ಮ ಪೂರ್ವದ ಗುರುಗಳನ್ನು ಬಿಟ್ಟು ಮತ್ತೆ ಬೇರೋಬ್ಬ ಹೊಸ ಗುರುಗಳನ್ನು ಮಾಡಿಕೊಂಡಾ ಚರಿಸುವದಕ್ಕೆ ಶಿವಾಗಮಗಳಿಗೆ ಸ್ವಲ್ಪಾದರೂ ಸಮ್ಮತಿ ಇಲ್ಲವು ಮತ್ತು ಮದುವೆ ಗಂಡನನ್ನು ಬಿಟ್ಟು ಉಪಕಿ ಗಂಡನನ್ನು ಮಾಡಿಕೊಂಡು ಆಚರಿಸುತ್ತಿದ್ದವಳು ಹೇಗೆ ವಿವಾಹ ಮೊದಲಾದ ಶುಭ ಕಾರ್ಯಗಳಿಗೆ ಅಯೋಗ್ಯಳಾಗಿರುವಳೋ ಹಾಗೆ ಪೂರ್ವದ ಗುರುಗಳನ್ನು ಬಿಟ್ಟು ಬೇರೊಬ್ಬ ಉಪಕಿ ಗುರುವಿನ ನ್ನಾಶ್ರಯಿಸಿ ಆಚರಿಸುತ್ತಿದ್ದವನು ವಿವಾಹಕ್ಕೂ ಶೋಭನ ಪ್ರಸ್ತಕ್ಕೂ ನಿರಂತರ ದೇವತಾ ಕೆಲಸಕ್ಕೂ ವೀರಶೈವ ಮಹಾಜನಂಗಳಿಗೆ ಅನ್ನೋದಕಗಳನ್ನು ನೀಡುವದಕ್ಕೂ ಪಂಗ್ತಿಯಲ್ಲಿ ಬಂದು ಕೂತುಕೊಳ್ಳುವದಕ್ಕೂ ನೋಡುವದಕ್ಕೂ ಗುರುಲಿಂಗ ಜಂಗಮರನ್ನು ಕೈಯಿಂದ ಮುಟ್ಟಿ ಪೂಜಿಸುವ ಕ್ಕೂ ಸಹ ಅಯೋಗ್ಯನಾಗಿರುವನು.

ಇದಲ್ಲದೆ ಲಿಂಗಾಂಗ ಸಂಬಂಧಿಗಳಾದ ಸ್ತ್ರೀ ಪುರುಷರು ತಮ್ಮ ಪೂರ್ವದಗುರುಗಳನ್ನು ಸಾಕ್ಷಾತ್ ಶಿವ ಸ್ವರೂಪಿಗಳೂ ತಪಸ್ವಿಗಳುಆತ್ಮಾನಾತ್ಮ ವಿವೇಕಿಗಳೂ ಅತ್ಯಂತ ಗೌರವ ಶಾಲಿಗಳೂ ಬೇಡಿದವರಿಗೆ ಬೇಕಾದ ಹಾಗೆ ಇಷ್ಟಾರ್ಥಗಳನ್ನು ಕೊಡತಕ್ಕವರೂ ಪಾರಿಶುದ್ಧರೂ ಭಯಶೋಕ ರಾಹಿತ್ಯರೂ ತಮ್ಮನ್ನೆ ಶಿಷ್ಯರನ್ನು ಮಾಳ್ಪ ಶಕ್ತಿಯುಳ್ಳವರೂ ನಿಶ್ಚಲರೂ ಯೆಂದು ಭಾವಿಸಿ ಅವರ ಪಾದವನ್ನು ಹುವುನೀರುಗಂಧ ಅಕ್ಷತ ಮೊದಲಾದ ಧೂಪದೀಪೋಪ ಚಾರಗಳಿಂದ ಪೂಜಿಸಿ ಅವರ ಪರಿಮುಖದಿಂದ ಶಿವಜ್ಞಾನೋಪ ದೇಶವನ್ನು ತೆಗೆದುಕೊಳ್ಳುವ ದೇವಿ ಹಿತವು ಆ ತಮ್ಮ ಪೂರ್ವದ ಗುರುಗಳನ್ನು ಬಿಟ್ಟು ಬೇರೆ ಪಟ್ಟ ಚರ ಪತಿಗಳಿಂದಾಗಲಿ ದೇಶಿಕ ಮೂರ್ತಿಗಳಿಂದಾಗಲಿ ಅವರಿಗೆ ಭಿನ್ನರೆಂದು ಹೇಳಿಸಿಕೊಳ್ಳುವ ಭಕ್ತ ಮಾಹೇಶ್ವರರಿಂದಾಗಲಿ ಅನ್ಯಮತಸ್ಥರಿಂದಾಗಲಿ ಶಿವಜ್ಞಾನೋಪದೇಶವನ್ನು ತೆಗೆದುಕೊಳ್ಳುವದು ಉಭಯ ಮಾರ್ಗ ಪರಿಭ್ರಷ್ಟತ್ವಕ್ಕೆ ಕಾರಣವು ಹಾಗೆ ಯಂಬದಾಗಿ ಜಗದಾರಾಧ್ಯರಾದ ನಮ್ಮ ಪೂರ್ವಾಚಾರ್ಯರು ಅನೇಕ ಖಂಡನ ಗ್ರಂಥಗಳನ್ನು ತೋರಿಸಿ ಸಿದ್ಧಾಂತ ಮಾಡಿ ಬಿಟ್ಟಿದ್ದಾರೆ ಆದ್ದರಿಂದ ಲಿಂಗಾಂಗ ಸಂಬಂಧಿಗಳಾದ ಸ್ತ್ರೀ ಪುರುಷರು ತಮ್ಮ ಪೂರ್ವದ ಗುರುಗಳಲ್ಲಿ ಶಿವಜ್ಞಾನೋಪದೇಶವನ್ನು ತೆಗೆದುಕೊಳ್ಳಬೇಕಲ್ಲದೆ ಅವರನ್ನು ಬಿಟ್ಟು ಗಂಡೊಬ್ಬ ಗುರುವಿನಲ್ಲಿ ಹೇಣತಿ ಯೊಬ್ಬ ಗುರುವಿನಲಿ ಮಗ ಒಬ್ಬ ಗುರುವಿನಲ್ಲಿ ಉಪಾಸನೆಯನ್ನು ಮಾಡಿ ಶಿವಜ್ಞಾನೋಪದೇಶವನ್ನು ಸರ್ವಥಾ ತೆಗೆದುಕೊಳ್ಳಲಾಗದು. ಒಂದು ಪಕ್ಷ ಯಾರು ತಮ್ಮ ಪೂರ್ವದ ಗುರುಗಳನ್ನು ಉದಾಸೀನ ಮಾಡಿ ಬೇರೆ ಗುರುಗಳಲ್ಲಿ ವಿಶ್ವಾಸವನ್ನಿಟ್ಟು ಉ

ಪದೇಶವಂ ತೆಗೆದುಕೊಳ್ಳುತ್ತಾರೋ ಅವರು ಶಿವಾಜ್ಞೋಲ್ಲಂಘನೆ ಮಾಡಿದಂತಾಗಿನರಕವನ್ನೇ ಪಡೆಯುತ್ತಾರೆ. ಈ ಮಾತಿನಲ್ಲಿ ಸಂಶಯವೇ ಇಲ್ಲವೆಂದು ಸಮರ್ಥಿಸುವ ಕೆಲ ಪ್ರಮಾಣಗಳನ್ನು ಇಲ್ಲಿ ಕೊಡಲ್ಪಡುವವು× ಸುಪ್ರ ಭೇದಾಗಮದಲ್ಲಿ----ಪೂರ್ವ ಗುರುಂ ಪರಿತ್ಯಜ್ಯ ಯೋನ್ಯ ಗುರು ಮುಪಾಸತೆ॥ ಸೋಪುನರ್ಭವ ಇತಿಜ್ಞೇಯಃ ಸರ್ವ ಕರ್ಮ ಸುಗರ್ಹಿತಃ॥...... ಯಂತಲೂ ಶಿವಪುರಾಣದಲ್ಲಿ ———ಬಹು ಲಿಂಗ ಪೂಜಕ ಶ್ಚೈವ ಬಹು ಭಾವ ಗುರುಸ್ತಥಾ ॥ ಬಹು ಪ್ರಸಾದಂ ಯೋಭುಂಕ್ತೆ ವೇಸ್ಯಾ ಪುತ್ರಃ ಸಉಚ್ಯತೆ॥...... ಯಂತಲೂ ವಾತುಲಾಗಮದಲ್ಲಿ--ಪುತ್ರಮಾತೃ ಪಿತೃಭ್ರಾತೃ ದಾರಾಬಂಧು ಜನಾಶ್ಚಯೇ ॥ ಏಕ ಏವ ಗುರುಸ್ತೇಷಾ ಮನ್ಯಥಾ ನರಕಂ ಭವೇತ್......... ಯಂತಲೂ ಪರಮೇಶ್ವರಾಗಮದಲ್ಲಿ ——— ಅತಿ ಕ್ರಮ್ಯ ಗುರು ಯಸ್ತು ಗುರಮನ್ಯಂ ಸಮಾಶ್ರಯೇತ್॥ ಸಜೀವನ್ನೇವ ಚಂಡಾಲೋನರಕಮಶ್ನುತೆ...... ಯಂತಲೂ ಹೇಳಲ್ಪಟ್ಟಿರುವದು ಈ ಸೂತ್ರಗಳೆಲ್ಲಾ ಮೇಲೆ ಕಂಡ ತಾತ್ಪರ್ಯಾರ್ಥವನ್ನೇ ದೃಢ ಪಡಿಸುತ್ತಿರುವವು ಅದು ಕಾರಣ ವೀರಶೈವ ಮತಾನುವರ್ತಿಗಳಾದ ಸ್ತ್ರೀ ಪುರುಷರು ತಮ್ಮ ಪೂರ್ವದ ಗುರುಗಳನ್ನು ಬಹಳ ಅಜ್ಞಾನಿಗಳೆಂದು ಭಾವಿಸಿ ಬಿಟ್ಟು ಬೇರೆ ಗುರುಗಳಲ್ಲಿ ಶಿವಜ್ಞಾನೋಪದೇಶವನ್ನು ಮರೆದಾದರೂ ತೆಗೆದುಕೊಳ್ಳಕೂಡದು.

ಶಿವಕಾರ್ಯ ವಿರುದ್ಧಾಶ್ಚೇದ್ಭತೃ ಭಾರ್ಯಾತ್ಮಜಾದಯಃ ॥
ಪರಿತ್ಯಾಜ್ಯನ್ತೆ ವಿಶೇಷ ವೀರಶೈವ ಪರಾಯಣೈಃ ॥

ಅಂದರೆ ವಿಶೇಷ ವೀರಶೈವಾಚಾರ ಸಂಪನ್ನನಾದ ಶಿವಭಕ್ತನು ಶಿವಭಕ್ತಿ ಶಿವಜ್ಞಾನ ಶಿವಾಚಾರ ಹೀನರಾದ ಸತಿಸುತ ಮಿತ್ರ, ಮೊದಲಾದ ಬಂಧು ಜನರನ್ನು ತ್ಯಜಿಸಿ ಬಿಡಬೇಕೆಂಬರ್ಥವು ಈ ರೀತಿ ಶಿವಾಗಮಗಳಲ್ಲಿ ಉಕ್ತವಾಗಿದ್ದರೂ ಸದ್ಧರ್ಮ ಸದಾಚಾರ ನೀತಿ ಹೀನರಾದ ಈ ಚಂಡಾಲ ಸತಿಸುತ ಮಿತ್ರ ಮೊದಲಾದ ವಿವೇಕ ಜನರೊಡನೆ ಶೇರಿ ಇದ್ದುಅವರ ಅಧೀನರಾಗಿ ಗುರುಗಳ ವಿಷಯದಲ್ಲಿ ಮಾತ್ರ ಹೀಗೆ ಗುಣಗಳನ್ನಾರಿಸಿ ತಿರಸ್ಕಾರಿಸುತ್ತಾ ಇದ್ದೀರಿ ಮತ್ತು ಉಡಕಿ ಗುರುಗಳನ್ನು ಕೇವಲ ಮನೆದೇವರಗಿಂತಲೂ ಹೆಚ್ಚಾಗಿ ಭಾವಿಸಿ ಅವರಿಗೆ ಮುಖ್ಯ ಪ್ರಾಣಾಭಿಮಾನಗಳನ್ನೊಪ್ಪಿಸಿ ಬಿಟ್ಟದ್ದೀರಿ ಆದರೆ ಹಿತಾಹಿತ ವಿವೇಕವುಳ್ಳ ವಿಚಾರಸೀಲರಾದ ಸಚ್ಛಿಷ್ಯರಿಗೆ ಇಂಥಾ ದುರ್ಮಾರ್ಗತನವು ಯೋಗ್ಯವಲ್ಲವಂದೇ ಅಭಿಪ್ರಾಯವು ಪೂರ್ವದ ಗುರುಗಳಲ್ಲಿ ಬ್ರಹ್ಮಜ್ಞಾನವೊಂದಿಲ್ಲದಿದ್ದರೂ ಅವರು ದೀಕ್ಷಾ ಮೂರ್ತಿಗಳೆನಿಸಿಕೊಂಡು ಅಷ್ಟಾವರಣಗಳಲ್ಲಿ ಶೇರಿ ನಿಜ ಗುರುಗಳಾಗಿರುವದರಿಂದ ಅವರು ಲೊಕಸ್ತುತರಾಗೇ ಇರುವರು ಈ ಮಾತಿನಲ್ಲಿ ಸಂಶಯವಿಲ್ಲ.

ಹಾಗಾದರೆ ಮೋಕ್ಷವು ಬ್ರಹ್ಮಜ್ಞಾನ ಸಾಧ್ಯಮಾಗಿರುವದಷ್ಟೆ ಅಂಥಾ

ಬ್ರಹ್ಮಜ್ಞಾನವು ಪೂರ್ವದ ಗುರುಗಳಲ್ಲಿ ಇಲ್ಲದೆ ಹೋದ ಪಕ್ಷದಲ್ಲಿ ಮೋಕ್ಷಾ ಪೇಕ್ಷಿಗಳಾದ ಶಿಷ್ಯರ-ಗತಿಯೇನು ಅವರು ಮತ್ತಾವ ಗುರುಗಳನ್ನಾಶ್ರಯಿಸಿ ಉಪದೇಶವನ್ನು ತೆಗೆದುಕೊಳ್ಳಬೇಕು ಯಂದರೆ ಮೋಕ್ಷವು ಬ್ರಹ್ಮಜ್ಞಾನ ಸಾಧ್ಯ ವಾಗಿರುವದೇನೋ ನಿಜ ಅಂಥ ಬ್ರಹ್ಮಜ್ಞಾನವು ಪೂರ್ವದ ಗುರುಗಳಲ್ಲಿ ಇಲ್ಲದೆ ಹೋದ ಪಕ್ಷದಲ್ಲಿ ಮೋಕ್ಷಾಪೇಕ್ಷಿಗಳಾದಶಿಷ್ಯರು-ಅತಿವರ್ಣಾಶ್ರಮಿಸಾ ಕ್ಷಾತ್‌ಗುರೂಣಾಂಗುರುರುಚ್ಯತೆ... ಯೆಂಬ ಸೂತ ಸಂಹಿತಾವಚ ನಾನುಸಾರವಾಗಿಅಪೂರ್ವದಗುರುಗಳಿಗೂ ಗುರುಗಳೆಂದು ಹೇಳಿಸಿಕೊಳ್ಳುವ ಜ್ಞಾನವೈರಾಗ್ಯಸಂಪನ್ನರಾದ ವಿರಕ್ತ ಜಂಗಮರಲ್ಲಿ ಶಿವಜ್ಞಾನೋಪದೇಶವನ್ನು ತೆಗೆದುಕೊಳ್ಳ ಬೇಕು.ಈ ಮಾತು ಅತ್ಯಂತವಿಹಿತವಾಗಿಯೂ ಅವಿರುದ್ಧವಾಗಿಯೂ ಶಾಸ್ತ್ರಸಂಮತವಾಗಿಯೂ ಇರುವದೆಂದು ಸಕಲ ಲಿಂಗಧಾರಿಗಳೂ ಚನ್ನಾಗಿ ಲಕ್ಷದಲ್ಲಿಟ್ಟಿರಬೇಕು. ಮತ್ತು ಅದೇ ಸೂತಸಂಹಿತೆಯಲ್ಲಿ ——ಅತಿ ವರ್ಣಾಶ್ರಮಃ ಪ್ರೋಕ್ತೋ ಗುರು ಸರ್ವಾಧಿಕಾರಿಣಾಂ......... ಯಂದು ಹೇಳಿರುವದರ ಮೇಲಿಂದ ಲಿಂಗಾಂಗಸಂಗಮುಜ್ಞಾನಿಗಳಾದ ವಿರಕ್ತ ಜಂಗಮರು ಸಕಲ ಭೋಗ ಮೋಕ್ಷ ಪ್ರದಾಯಕರೂ ಅತ್ಯಂತ ಪರಿಶುದ್ಧಾತ್ಮರೂ ಹರಿಬ್ರಹ್ಮೇಂದ್ರಾದಿ ಸರ್ವ ಸಮುಪಾಸ್ಯರು ದಿವ್ಯಶಿವಜ್ಞಾನೋಪದೇಶ ಕರ್ತರೂ ವೇದಾಗಮೋಪನಿಷತ್ಸಿದ್ಧಾಂತಾರ್ಥವನ್ನು ಚನ್ನಾಗಿ ಬಲ್ಲವರೂ ಮಹಾಪರಾಕ್ರಮ ಶಾಲಿಗಳೂ ಗುರುಗಳಿಗೂ ಗುರುಗಳೂ ಜಗದ್ಗುರುಗಳೂ ಆಗಿರುತ್ತಾರೆಂದು ನಿಸ್ಸಂಶಯವಾಗಿ ಹೇಳಬೇಕಾಗಿದೆ ..................

ಮತ್ತು ರುಗ್ವೇದಾರಣ್ಯಕದಲ್ಲಿ——ಇಶ್ವರೋತಿಥಿರೇವ ಚರಿತಸ್ತ ಮುಪಾಸ್ಮಹೆ.........ಯಂತಲೂ ವೀರಾಗಮದಲ್ಲಿ ——ಸರ್ವ ಲೋಕೋಪ ಕಾರಾಯ ಯೋದೇವಃ ಪರಮೇಶ್ವರಃ ॥ ಚರತ್ಯತಿಥಿ ರೂಪೇಣನಮಸ್ತೆ ಜಂಗಮಾತ್ಮನೆ.........ಯಂತಲೂ ಹೇಳಲ್ಪಟ್ಟಿರುವದು. ಈ ಸೂತ್ರಗಳೆಲ್ಲಾ ಅನೇಕ ಸದ್ಗುಣ ಸಂಪನ್ನನಾದ ಮಹೇಶ್ವರನೇತಾ ಪತ್ರಯವೆಂಬ ಮಹಾವನಿಯಿಂದ ಸಂತಾಪ ಗೊಳ್ಳುತ್ತಿರುವ ಪ್ರಾಣಿಗಳನ್ನು ಧರಿಸುವದಕ್ಕೋಸ್ಕರ ಭೂತಲದಲ್ಲಿ ವಿರಕ್ತ ಜಂಗಮನಾಗಿ ಸಂಚರಿಸುತ್ತಿರುವನೆಂದು ನಿರೂಪಿಸುತ್ತಿರುವವು ಮತ್ತಂ ಈ ಸೂತ್ರಗಳು ದೃಢ ವೈರಾಗ್ಯ ಸಂಪನ್ನರಾದ ವಿರಕ್ತ ಜಂಗಮರ ಸರ್ವವ್ಯಾಪಿತ್ವಮಂ ನೋಡಿ ಸರ್ವತಾದಾತ್ಮ್ಯವನ್ನು ಪೇಳುತ್ತಲಿರುವವು ಮತ್ತಂ ಈ ಸೂತ್ರಗಳು ಅಂತರಂಗ ಕ್ರಿಯಾನಿಷ್ಠರಾದ ವಿರಕ್ತ ಜಂಗಮರ ನಿಸ್ಪೃಹತ್ವವನ್ನು ನೋಡಿ ಸರ್ವಾಧಿಕಾರತ್ವವನ್ನು ಪ್ರತಿಪಾದಿಸುತ್ತಿರುವವು ಮತ್ತಂ ಈ ಸೂತ್ರಗಳು ತಪೋನಿಷ್ಠರಾದ ವಿರಕ್ತ ಜಂಗಮರ ಶಾಂತಿ ಕ್ಷಮಾದಿ ಸದ್ಗುಣಗಳನ್ನು ನೋಡಿ ಸಾರ್ವ ಭೌಮತ್ವವನ್ನು ದೃಢ ಪಡಿಸುತ್ತಿರುವವು ಮತ್ತಂ ಈ ಸೂತ್ರಗಳು ಅಯೋ ನಿಜರಾದ ವಿರಕ್ತ ಜಂಗಮರ ಪಾರಿಶುದ್ಧತ್ವವನ್ನು

ನ್ನೋಡಿ ಸಾಕ್ಷಾತ್ ಜಗದ್ಗುರುತ್ವವನ್ನು ಪ್ರತಿಪ ದಿಸುತ್ತಿರುವವು ಇದಲ್ಲದೆ ನಿಷ್ಪಕ್ಷಪಾತ ವಿಚಾರದಲ್ಲಿ ಆಲೋಚನೆ ಮಾಡಿ ನೋಡಿದಾಗ್ಯಾದರೂ ಶಿವಜೀವೈಕ್ಯ ಜ್ಞಾನಸಂಪನ್ನರಾದ ವಿರಕ್ತ ಜಂಗಮರೇ ಪರಿಪಕ್ವರಾದ ಸಕಲಭಕ್ತಮಾಹೇಶ್ವರರಿಗೂ ಶಿವಜ್ಞಾನೋಪದೇಶವನ್ನು ಕೊಡುವದಕ್ಕೆ ಕರ್ತರಾಗಿರುವರು ಅದು ಕಾರಣ ಪೂರ್ವದ ಗುರುಗಳಲ್ಲಿ ಬ್ರಹ್ಮಜ್ಞಾನವಿಲ್ಲದ ಹೋದಪಕ್ಷದಲ್ಲಿ ಮೋಕ್ಷಾಪೇಕ್ಷಿಗಳಾದ ಶಿಷ್ಯರು ಆ ಪೂರ್ವದ ಗುರುಗಳಿಗೂ ಗುರುಗಳೆಂದು ಹೇಳಿಸಿಕೊಳ್ಳುವ ಈ ವಿರಕ್ತ ಜಂಗಮರಲ್ಲಿ ಸಂಪೂರ್ಣವಾಗಿ ಭಕ್ತಿವಿಶ್ವಾಸಗಳನ್ನಿಟ್ಟು ಶಿವಜ್ಞಾನೋಪದೇಶವನ್ನು ಸಂದೇಹಪಡದೆ ಅತ್ಯಾದರದಿಂದ ತೆಗೆದುಕೊಳ್ಳಬೇಕು.

(ಇಲ್ಲಿ ವಿಚಾರವುಂಟು) ಕೆಲವರು ಅ ವಿವೇಕಿಗಳಾದ ಜಡಮೂಢ ಜನರು ಸಿದ್ಧಾಂತ ಶಿಖಾಮಣಿಯಲ್ಲಿ ಒಬ್ಬನೇ ದೀಕ್ಷಾ ಗುರುವು ಶಿಕ್ಷಾ ಗುರುವು ಜ್ಞಾನ ಗುರುವು ಆಗುತ್ತಾನೆಂದು ಹೇಳಲ್ಪಟ್ಟಿರುತ್ತೆ ಅದು ಕಾರಣ ನಿರಾಭಾರಿ ವೀರಶೈವರಿಗೆ ಈ ಗುರುವರ್ಗದ ಪಟ್ಟಚರಪತಿಗಳೇ ಗುರುಗಳಾಗುತ್ತಾರೆ. ಇವರೇ ಅಷ್ಟಾವರಣಾಂತರ್ಗತ ಜಂಗಮರಾಗುತ್ತಾರೆ ಹಾಗೆ ಯಂದು ವಿಚಾರ ಮಾಡದೆ ನೀಚವಾಗಿ ಬಗುಳುತ್ತಿರುವರಷ್ಟೆ ಆದರೆ ನಮ್ಮ ವಿಚಾರದಲ್ಲಿ ಈ ವಿವಾದವು ಶುದ್ಧ ಅಸಮಂಜಸವಾಗಿರುವದೆಂದು ತೋರಿಬರುತ್ತಿವೆ ಅದು ಹೇಗಂದರೆ ಸಿದ್ಧಾಂತ ಶಿಖಾಮಣಿಯಲ್ಲಿ ಪಿಂಡಾದಿಜ್ಞಾನಶೂನ್ಯಾಂತವಾದ ನೂರೊಂದು ಸ್ಥಲಗಳೂ ಇವೆ ಈ ನೂರೊಂದು ಸ್ಥಲಗಳನ್ನು ಏರಲು ಪ್ರತಿಒಬ್ಬ ವೀರಶೈವನಿಗೂ ಅಧಿಕಾರವಿದೆ ಇದಲ್ಲದೆ ನಿರಾಭಾರಿ ವೀರಶೈವರಿಗಿಷ್ಟು ಸ್ಥಲಾಚರಣೆ ಗುರುಸ್ಥಲದ ಪಟ್ಟಚರಪತಿಗಳಿಗಿಷ್ಟು ಸ್ಥಲಾಚರಣೆ ಈ ಈಸ್ಥಲಾಚರಣೆಗಳಿಗೆ ಇವರಿವರೇ ಅಧಿಕಾರಿಗಳೆಂದೇನೂ ಈ ಸಿದ್ಧಾಂತಶಿಖಾಮಣಿಯಲ್ಲಿ ಹೇಳಲ್ಪಟ್ಟಿಲ್ಲ ಆದರೆ ಇವರಿವರಅಧಿಕಾರ ಭೇದವನ್ನು ಮಾತ್ರ ಸಕಲಭಾಷ್ಯಕಾರರೂಒಡಂಬಟ್ಟು ತಲೆದೂಗುವ ಹಾಗೆ ಬಹು ಸಮಂಜಸವಾಗಿ ಹೇಳಲ್ಪಟ್ಟಿದೆ ಅದು ಹೇಗಂದರೆ ಉದಾಹರಣೆ—ಆಚಿನೋತಿ ಶಾಸ್ತ್ರಾರ್ಥಮಾಚಾರಂ ಸ್ಥಾಪಯತ್ಯಪಿ ॥ ಸ್ವಯಮಾಚರತೆ ಯಸ್ತು ಆಚಾರ್ಯೋಹಿಸ ಕಥ್ಯತೆ.........ಎಂಬ ಈ ದೀಕ್ಷಾ ಗುರುಸ್ಥಲದ ಸೂತ್ರವು ಶಿವಾದ್ವೈತಕ್ಕೆ ಬಂದ ಕುಂದಕವನ್ನು ಹೋಗಲಾಡಿಸುವದು ಸ್ವಮತೋದ್ಧಾರ ವಿಷಯಕವಾದ ವ್ರತಗಳನ್ನಾಚರಿಸುವದು ಶಿಷ್ಯರನ್ನು ಸದಾಚಾರ ಸಂಪನ್ನರನ್ನಾಗಿ ಮಾಡುವದಲ್ಲದೆ ತಾವೂ ಕೂಡಾ ಸದಾಚಾರ ಸಂಪನ್ನರಾಗಿ ವರ್ತಿಸುವದು ವೇದಶಾಸ್ತ್ರ ಮರ್ಯಾದೆಗನುಸರಿಸಿ ಶಿವದೀಕ್ಷಾದಿ ಕರ್ಮಗಳನ್ನೆಸಗುವದು ಅನಾಚಾರಿಗಳಾದ ಲಿಂಗಧಾರಿಗಳಿಗೆ ತಕ್ಕಪ್ರಾಯಶ್ಚಿತ್ತಗಳಂ ಮಾಡುವದು ಲೌಕಿಕ ಯಾಚಕ ವೃತ್ತ್ಯಾದಿಗಳಿಂದ ಜೀವಿಸುವದು ಇವೇ ಮೊದಲಾದ ಭೇದವಾದಗಳಿಂದ ಕೂಡಿದಂಥಾ ಪ್ರವೃತ್ತಿ ಕರ್ಮರೂಪಗಳಾದ ಕೆಲಸಗಳನ್ನು ಈ ಗುರು ವರ್ಗಕ್ಕೆ ಸೇರಿದ ಪಟ್ಟಚರಪತಿಗಳಿಗೆ ವಿಧಿಸುತ್ತಿದೆ......

ಸರ್ವಸಂಸಾರ ಸೌಖ್ಯಾ ನಿತ್ಯಕ್ತ್ವಾಚಿತ್ತಂ ಶಿವೇಲಯೇತ್ ॥
ದಂಡಕೌಪಿನ ಕಾಷಾಯ ಜಿಟಾವಲ್ಕಲಧಾರಕಃ ।
ಮುಂಡೀವಾಶಿವಚಿನ್ಹಾನಿಧಾರಯೇ ದಜನಾದಿಕಂ ॥
ಭಿಕ್ಷಾಸೀನಿಯತಾಹಾರ ಸ್ಸುಖಸಂಸಾರ ವರ್ಜಿತಃ।
ನಿರಾಭಾರೀತಿವಿಜ್ಞೇಯಃ ಸಏವ ಪರಮಶ್ಶಿವ ಃ ॥

ಎಂಬ ಈ ಮಾತುಲಾಗಮ ವಚನವನ್ನನುಸರಿಸಿ —ನಿರ್ಮಮೋ ನಿರ ಹಂಕಾರೋ ನಿರಸ್ತಕ್ಲೇಶ ಸಂಚಕಃ ॥ ಭಿಕ್ಷಾಸೀಸಮಬುದ್ಧಿಶ್ಚಮುಕ್ತ ಪ್ರಾ ಯೋಮುನಿರ್ಭವೇತ್......ಎಂಬ ಈ ಸ್ವಯಲಿಂಗ ಸ್ಥಳದ ಸೂತ್ರವು ಶಿವನ ಲ್ಲಿಯ ರಕವಿಷಯ ಪರಿತ್ಯಾಗ ನಿರ್ವ್ಯಾಪಾರ ನಿರಭಿಮಾನ ಭಿಕ್ಷಾಹಾರ ಬಿಡ ಲ್ಪಟ್ಟ ಕ್ಲೇಶ ಸಮಬುದ್ಧಿ ಜ್ಞಾನಸಿದ್ಧಿ ಇತ್ಯಾದಿ ನಿವೃತ್ತಿ ಕರ್ಮರೂಪಗಳಾದ ಕೆಲಸಗಳನ್ನು ಅಷ್ಟಾವರಣ ಪ್ರವಿಷ್ಟರಾದ ಈ ವಿರಕ್ತ ಚರಮೂರ್ತಿಗಳಿಗೆ ಹೇಳಲ್ಪಟ್ಟಿಥೆ......

ಮತ್ತು ಯಾರಾದರು ಶಿವಭಕ್ತರು ಭಕ್ತಿಯಿಂದೊಡಗೂಡಿ ಶಿಷ್ಯರಾಗುವ ದಕ್ಕೆ ಬಂದರೆ ಅವರಿಗೆ ವಿರಕ್ತರಾದ ಚರಮೂರ್ತಿಗಳು ಶಿವದೀಕ್ಷಾ ಸಂಸ್ಕಾರ ಮೊದಲಾದದ್ದನ್ನು ಮಾಡದೆ ಶಿವಜ್ಞಾನೋಪದೇಶವನ್ನು ಮಾತ್ರ ಮಾಡ ಹುದೆಂದು ಸುಪ್ರಭೇದಾಗಮ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿಥೆ---ದೈ ವಾದಾಗಚ್ಛತಾಂ ವ್ರಂಸಾಮುಪದೇಶ ಕೃತೋಭವೇತ್ ॥ ಜ್ಞಾನೋಪದೇಶಂ ಕರ್ತವ್ಯಂ ನಚಕ್ರಿಯೋಪದೇಶಕೃತ್......ಹೀಗೆ ಗುರುಜಂಗಮರ ಅಧಿಕಾರ ಗಳೂ ಲಕ್ಷಣಗಳೂ ಉದ್ಯೋಗ ವರ್ತನಗಳೂ ಆಚಾರಗಳೂ ಏಕರೂಪವಾಗಿ ರದೆ ಭಿನ್ನಭಿನ್ನವಾಗಿರುವದರಿಂದ ನಿವೃತ್ತಿ ಮಾರ್ಗದಲ್ಲಿರುವ ಈ ನಿರಾಭಾರಿ ವೀರಶೈವರಿಗೆ ಪ್ರವೃತ್ತಿ ಮಾರ್ಗ ಕ್ರಿಯಾಬದ್ಧರಾದ ಈ ಗುರುವರ್ಗದ ಪಟ್ಟ ಚರಪತಿಗಳೇ ಗುರುಗಳಾಗುತ್ತಾರೆಂದೂ ಇವರೇ ಅಷ್ಟಾವರಣಾಂತರ್ಗತ ಜಂ ಗಮರಾಗುತ್ತಾರೆಂದೂ ಸುಮ್ಮನೆ ಆಧಾರವಿಲ್ಲದೆ ಹೇಳಿದರೆ ಅಂಥಾ ನಿರಾಧಾ ರವಾದ ಮಾತನ್ನು ಜ್ಞಾನಿಗಳೆಂದಿಗೂ ಒಪ್ಪಿಕೊಳ್ಳಲಾಗುವದಿಲ್ಲಾ ಗುರುಜಂ ಗಮರ ತಾರತಮ್ಯವನೀ ಪ್ರವೃತ್ತಿ ನಿವೃತ್ತಿ ಕರ್ಮ ರೂಪಗಳಾದ ಕೆಲಸಗಳ ಕುಂದು ಹೆಚ್ಚುಗಳಿಂದಲೇ ನಿಶ್ಚಯಿಸಬಹುದಾಗಿಥೆ

ಪಂಚಾಚಾರ್ಯರೆಂದರೆ ರೇವಣಾರಾಧ್ಯ ಮರುಳಾರಾಧ್ಯ ಏಕೋರಾಮಾ ರಾಧ್ಯ ಪಂಡಿತಾರಾಧ್ಯ ವಿಶ್ವಾರಾಧ್ಯಾ ಎಂಬ ಈ ಹೆಸರುಳ್ಳ ಮಹದಾಚಾರ್ಯರೇ ಪಂಚಾಚಾರ್ಯರು ಇವರೇ ಪರಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ಹುಟ್ಟಿಬಂದು ಈ ಭೂಲೋಕದಲ್ಲಿ ಸ್ವಮತ ಸ್ಥಾಪನಾಪರ ಮತಖಂಡನಮಾ ಡಿರುವವರು ಇದಕ್ಕೆ---ಸದ್ಯೋಜಾತಮುಖೋತ್ಪನ್ನೊ ರೇಣುಕಃ ಪರಿಕೀರ್ತಿ ತಃ-ವಾಮದೇವ ಮುಖೋತ್ಪನ್ನೊ ದಾರುಕಃ ಪರಿಕೀರ್ತಿತಃ-ಅಘೋರಾಖ

ಮುಖೋತ್ಪನ್ನೋ ಶಂಖು ಕರ್ಣೇತಿ ನಾಮಕಃ—ತತ್ಪುರುಷ ಮುಖೋತ್ಪನ್ನೋ ಧೇನು ಕರ್ಣ ಇತೀರಿತಃ--ಈಶಾನಾಖ್ಯ ಮುಖೋತ್ಪನ್ನೋ ವಿಶ್ವಕರ್ಣೇತಿ ವಿಶ್ರುತಃ-----ಯಂಬ ಈ ಶಿವಾಗಮವಚನಗಳೇ ಮೂಲಕಾರಣವು.

ಜಂಗಮನೆಂದರೆ ಇವನ ಉತ್ಪತ್ತಿ ಯಾರಿಗೂ ಗೊತ್ತೇ ಇಲ್ಲ ಇವನು ಜನನೀ ಜನಕರಿಂದ ಹುಟ್ಟದೆ ಇರುವ ತನುವಂಧರಿಸಿ ಅಸದೃಶವಾದ ಲೋಕ ನಿರ್ಮಾಣವಂ ಮಾಡಿ ಆದಕ್ಕೆ ತಾನೇ ಅಭಿಮಾನಿಯಾಗಿ ಪರಿಪಾಲಿಸುತ್ತಾ ಈ ಗುರುಲಿಂಗಗಳಿಗೆ ಮಾತೃಸ್ಥಾನನಾಗಿರುವನು ಇವೇ ಅಭಿಪ್ರಾಯವನ್ನು ಪಾರಮೇಶ್ವರಾಗಮದಲ್ಲಿ--- ಲಿಂಗೋತ್ಪತ್ತಿ ಗುರೂಶ್ಚೈವಗುರೂತ್ಪತ್ತಿಸ್ತು ಜಂಗಮಾತ್॥ ಜಂಗಮೋತ್ಪತ್ತಿ ಶೂನ್ಯತ್ವಾತ್ ತಚ್ಛನ್ಯೋ ಜಂಗಮೋಭವೇತ್.........ಯಂಬೀ ಶ್ಲೋಕದಿಂದ ಹೇಳಲ್ಪಟ್ಟಿರುವದು.

ಆ ಜಗದೀಶ್ವರನಿಗೆ ಪರಂಜ್ಯೋತಿ ಪರಬ್ರಹ್ಮ ಪಾರ್ವತಿಪತಿ ಪಾಪನಾಶಕ ಇವು ಮೊದಲಾಗಿ ಪರ್ಯಾಯನಾಮಗಳಿರುವಂತೆ ಈ ಅತಿಥಿಗಳಿಗೆ ಅತ್ಯಾಶ್ರಮಿ ನಿರಾಭಾರಿ ಷಟಸ್ಥಲೀ ಚರಮೂರ್ತಿ ಜಂಗಮಮೂರ್ತಿ ಶಿವಯೋಗಿ ಯತೀಶ್ವರನು ವೀರಶೈವನು ಯಂಬದಾಗಿ ಇವು ಮೊದಲಾಗಿ ಪರ್ಯಾಯನಾಮಗಳುಂಟು ಈ ಅಭಿಪ್ರಾಯವನ್ನಾದರೂ ಶೃತಿಸ್ಮೃತಿ ಶಿವಾಗಮಗಳಸಾರವಾಗಿರುವ ಶ್ರೀಕರ ಭಾಷ್ಯದಲ್ಲಿ ----- ಅತ್ಯಾಶ್ರಮೀ ನಿರಾಭಾರಿ ಷಟಸ್ಥಲೀ ಜಂಗಮಶ್ಚರಃ ಶಿವಯೋಗೀ ಯತೀರ್ವೀರೋ ನಾನೇ ಪುನಕದಾಚನಾ......ಯಂಬೀ ಪ್ರಸಿದ್ಧವಾದ ಪ್ರಮಾಣ ವಚನದಿಂದ ಹೇಳಲ್ಪಟ್ಟಿರುವದು

ಸಾಮಾನ್ಯವೀರಶೈವಕ್ಕಿಂತಲೂವಿಶೇಷವೀರಶೈವವಿಶೇಷವೀರಶೈವಕ್ಕಿಂತಲೂನಿರಾಭಾರವೀರಶೈವಹೀಗೆಒಂದುಕ್ಕೊಂದುಅಧಿಕವಾಗಿಇದ್ದೇಇರುವವು ಇದೊಂದನ್ನು ವಿಚಾರಮಾಡಿನೋಡದೆನಿ ರಾಭಾರಿವೀರಶೈವರಿಗಿಂತಲೂವಿಶೇಷವೀರಶೈವರೆನಿಸಿಕೊಳ್ಳುವ ಈ ಪಟ್ಟಚರ ಪತಿಗಳೇ ಅತ್ಯಧಿಕರಾಗಿರುವರೆಂದು ಚನ್ನಾಗಿ ತಿಳಿದುಕೊಂಡಿದ್ದಾರೆ ಈ ನಿರಾಭಾರಿ ವೀರಶೈವರಿಗಿಂತಲೂ ವಿಶೇಷವೀರಶೈವರೆನಿಸಿಕೊಳ್ಳುವ ಈ ಪಟ್ಟಚರ ಪತಿಗಳೇ ಅತ್ಯಧಿಕರಾಗಿದ್ದಾರೆ ಈ ಶಿವಾಗಮಗಳು ——— ಸಾಮಾನ್ಯಂ ವೀರಶೈವಂಚ ವಿಶೇಷಂಚ ತತಃಪರಂ॥ ನಿರಾಭಾರಂ ವೀರಶೈವಂ ನತತೋಧಿಕ ಮೀಶ್ವರಿ......ಯಂದು ಆ ನಿರಾಭಾರಿ ವೀರಶೈವರಿಗಿಷ್ಟು ಅತ್ಯುತ್ಕೃಷ್ಟತ್ವವನ್ನೆಂದಿಗೂ ಹೇಳುತ್ತಿರಲಿಲ್ಲವು ಆದುದರಿಂದ ನಿರಾಭಾರಿ ವೀರಶೈವರು ವಿಶೇಷ ವೀರಶೈವರೆನಿಸಿಕೊಳ್ಳುವ ಈ ಪಟ್ಟಚರ ಪತಿಗಳಿಗಿಂತಲೂ ಅತ್ಯುತ್ಕೃಷ್ಟರಾಗಿರುವರು.

ಮತ್ತು ಈ ನಿರಾಭಾರಿ ವೀರಶೈವ ಜಂಗಮರು ಶೇವಾಪರ ಜಂಗಮ ವ್ಯಾವಹಾರಿಕ ಜಂಗಮ ಸಾಭಾರಿ ಜಂಗಮ ಈ ಮೊದಲಾದೆಲ್ಲ ಜಂಗಮರಿಗಿಂತಲೂ ಅತ್ಯಂತ ಶ್ರೇಷ್ಠರಾಗಿರುವರೆಂದು ಶಿವರತ್ನಾಕರದ ವಚನವು ಹೀಗೆ ಹೇಳಿರುವು

ದು-ಲಿಂಗ ಕ್ಷೇತ್ರಂಗುರು ಸ್ಥಾನಂ ಗುರು ಕ್ಷೇತ್ರಂಚ ಜಂಗಮಃ ॥ ಜಂಗಮ ಸ್ತು ನಿರಾಭಾರೀ ಭಾರಾಭಾರ ವಿವರ್ಜಿತಃ ........ಇತ್ಯಾದಿ ಸ್ವಮತ ಗ್ರಂಥಗ ಳು ನಿರಾಭಾರಿ ವೀರಶೈವರಲ್ಲಿರುವ ಜಂಗಮತ್ವವನ್ನು ತ್ರಿಕರಣಗಳಲ್ಲಿಯೂ ಶ್ರೇ ಷ್ಠವೆಂದು ಭಾವಿಸಿ ಹೊಗಳುತ್ತಿದ್ದಾಗ್ಯೂ ಭಯವಿಲ್ಲದೆ ನಿರಾಭಾರಿಗಳಾದ ವಿರ ಕ್ತ ಜಂಗಮರು ಅಷ್ಟಾವರಣಗಳಲ್ಲಿ ಸೇರಿದ ಜಂಗಮರಲ್ಲವೆಂದು ಹೇಳಿ ನಿಂದಿಸಿ ನುಡಿಯತಕ್ಕಂಥ ಜನರು ಕೇವಲ ಹುಚ್ಚುದುಲ್ಲುಗಳೇಸರಿ.

ಅತ್ಯು ತ್ಕೃಷ್ಟೋಭವೇತ್ಪೂಜ್ಯೋ ನಿರಾಭ ರೀನ ಸಂಶಯಃ॥........ ಯಂಬೀ ಶಿವೋಕ್ತಿಯನ್ನು ವಿಚಾರ ಮಾಡಿ ನೋಡದೆ ವ್ಯರ್ಥವಾಗಿ ಸದ್ಧರ್ಮಾಚ ರಣೆಯುಳ್ಳ ಈ ನಿರಾಭಾರಿ ವೀರಶೈವರಿಗೆ ಅತ್ಯಂತ ಅಸಹನೆಯನ್ನು ಮಾಡುವುದು ಯುಕ್ತವಲ್ಲ......

ಅದೂನಾನೇ ಇದೂನಾನೇ ಯಲ್ಲವೂ ನಾನೆ ಯಂದು ಹೇಳಿಕೊಳ್ಳುತಾ ಜನರಂ ಮರುಳ್ಗೊಳಿಸಿವಿಪರೀತವಾಗಿ ನಡೆಯುತ್ತಿರುವ ಕಳ್ಳವೇದಾಂತಿಗಳಂತೆ ಗುರು ವೂನಾನೇ ಲಿಂಗವೂನಾನೇ ಜಂಗಮವೂನಾನೇ ಯಂದು ಹೇಳಿಕೊಳ್ಳುತ್ತಾ ಯಾರ ದೂ ಭಯವಿಲ್ಲದ ಹಾಂಗೆ ಸ್ವೇಚ್ಛಾಚಾರಗಳಂ ಮಾಡುತ್ತಲಿರುವ ಈ ನೀಚಾತ್ಮರ ನ್ನು ಖಂಡಿತವಾಗಿ ವಿರಶೈವ ಮತಸ್ಥರೆಂದು ಯಂದಿಗೂ ಹೇಳಲಾಗುವದಿಲ್ಲ ಆದೇ ನು ಕಾರಣವೆನೆ ಪ್ರವೃತ್ತಿ ಮಾರ್ಗದ ದೀಕ್ಷಾ ಗುರುವೂ ನಿವೃತ್ತಿ ಮಾರ್ಗದ ಜ್ಞಾ ನಗುರುವೂ ಅಂದರೆ ವಿರಕ್ತ ಮೂರ್ತಿಯೂ ಲಿಂಗವೂ ತಾನೆಯಾಗಬೇಕಾಗಿದ್ದಿ ತಲ್ಲವೆ. ಮತ್ತು ಗ್ರಾಮದಲ್ಲಿಯೂ ಅರಣ್ಯದಲ್ಲಿಯೂ ಭಕ್ತರ ವಕ್ಷಸ್ಥಲದಲ್ಲಿಯೂಸಹ ತಾನೇ ಇರಬೇಕಾಗಿದ್ದಿತಲ್ಲವೆ ಈಸದ್ಭಕ್ತರ ಮನೆಗಳಲ್ಲಿ ಒಂದು ವೇಳೆ ಲಿಂಗವಾಗಿ ಪೂಜಿಸಿಕೊಳ್ಳುತ್ತಾ ಒಂದು ವೇಳೆ ಗುರುವಾಗಿ ಪೂಜಿಸಿಕೊಳ್ಳುತ್ತಾ ಒಂದು ವೇಳೆ ಜಂಗಮವಾಗಿ ಪೂಜಿಸಿಕೊಳ್ಳುತ್ತಾ ನಿತ್ಯವೂಹೀಗೆಇರಬೇಕಾಗಿದ್ದತಲ್ಲವೆ ಆಲೋಚನೆ ಮಾಡಿನೋಡಿದರೆ ಗುರುಲಿಂಗಜಂಗಮ ಈ ಮೂರು ವಸ್ತುಗಳ ವರ್ತನವನ್ನುಒಬ್ಬನೇ ಅನುಸರಿಸಿರುವದು ಅತ್ಯಂತ ಶಾಸ್ತ್ರ ವಿರುದ್ಧವಾದುದು ಮತ್ತು ಗುರುಲಿಂಗ ಜಂಗಮ ಈ ಮೂರು ತಾನೇ ಆದಬಳಿಕ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷ ಮಂತ್ರ ವೆಂಬ ಈ ಐದು ಆವರಣಗಳು ಸಹ ತಾನೇ ಯಾಕಾಗಬಾರದು ಗುರುಲಿಂಗ ಜಂ ಗಮ ಈ ಮೂರು ತಾನೇ ಆಗಿದ್ದರೆ ಇದಕ್ಕೆ ಬಲವತ್ತರವಾದ ಪ್ರಮಾಣ ವಚನಗಳು ಶಾಸ್ತ್ರಗಳಲ್ಲಿ ಒಂದಾದರೂ ಇರಬೇಕೋ ಇಲ್ಲವೋ ಇತ್ಯಾದಿ ಪ್ರಶ್ನೆಗಳಿಗೆ ಸಮಂಜ ಸವಾದ ಉತ್ತರವನ್ನು ಒಂದಾದರೂ ಕೊಟ್ಟು ಒಡಂಬಡಿಸದಿದ್ದರೆ ಗುರುಲಿಂಗ ಜಂ ಗಮ ಈ ಮೂರು ವಸ್ತು ಅದು ಹೇಗೆ ತಾನೇ ಆಗುವನು ಹವಳ ಮುತ್ತು ರತ್ನ ಈ ಮೂರು ಸಮುದ್ರದಲ್ಲಿ ಹುಟ್ಟಿದ ಮಾತ್ರಕ್ಕೆ ಅವು ಒಂದುಕೊಂದು ಹೇಗೆ ಸಮಾನ ವಾಗಲಾರವೋ ಹಾಗೆಯೇ ಗುರುಲಿಂಗ ಜಂಗಮ ಈ ಮೂರು ವಸ್ತುಗಳು ಸಾಕ್ಷಾ

ಷ್ ಪರಶಿವನರೂ ಪಾಂತರಗಳಾಗಿದ್ದರೂ ಇವರು ಒಬ್ಬರಿಗೊಬ್ಬರು ಸಮಾನರೆಂದಿಗೂ ಆಗುವದಿಲ್ಲಾ ಕಣ್ಣು ಮೂಗು ಕಿವಿ ಕೈಯಿ ಕಾಲು ಈ ಮೊದಲಾದವಯವಗಳು ಒಂದೇ ಪ್ರಕೃತಿಯಲ್ಲಿದ್ದಾಗ್ಯೂ ಇದು ಉತ್ತಮ ಅವಯವ ಇದು ಮಧ್ಯಮ ಅವಯವ ಇದು ಕನಿಷ್ಠ ಅವಯವ ಯೆಂದು ಹೇಗೆ ಭೇದ ಪ್ರತೀತಿಗೊಳಗಾಗಿ ಸಮವೆನಿಸಿಕೊಳ್ಳುವದಿಲ್ಲವೋ; ಹಾಗೆ ಗುರು ಲಿಂಗ ಜಂಗಮ ಈ ಮೂರು ಒಂದೇ ವಸ್ತುವಿನ ಪರಿಣಾಮಗಳೆಂದು ಭಾವಿಸಲ್ಪಟ್ಟಾಗ್ಯೂ ಈ ಶಿವಲಿಂಗ ಗುರುಗಳೂ ಮಾತ್ರ ವಿರಕ್ತ ಜಂಗಮನಿಗೆಂದಿಗೂ ಸಮವೆನಿಸಿಕೊಳ್ಳುವದಿಲ್ಲಾ ಈ ಕಾರಣದಿಂದ ಲಿಂಗವೂ ನಾನೇ ಗುರುವೂ ನಾನೇ ಜಂಗಮವೂ ನಾನೇ ಯೆಂದು ಬಂಗೀಕೋರರಂತೆ ಬಗುಳುತ್ತಿರುವವರನ್ನು ಖಂಡಿತವಾಗಿ ವೀರಶೈವ ಮತಸ್ಥರೆಂದು ಯೆಂದಿಗೂ ಹೇಳಲಾಗುವದಿಲ್ಲ.

ಮತ್ತು ಲಿಂಗಧಾರಿಗಳಾದ ಸ್ತ್ರೀಯರಲ್ಲಿ ಕೆಲರು ಇದು ಅನಾಚಾರವೆನುತಲಾಗಲಿ ಇದು ನಮ್ಮ ಧರ್ಮ ಶಾಸ್ತ್ರ ವಿರುದ್ಧ ವೆನುತಲಾಗಲಿ ಇದು ಚಾಂಡಾಲವೃತ್ತಿ ಯೆನುತಲಾಗಲಿ ಇದು ಪಾಪಕ್ಕೆ ಮೂಲಕಾರಣ ವೆನುತಲಾಗಲಿ ಆಲೋಚಿಸಿ ನೋಡದೆ ನಿಶ್ಚಿಂತೆಯಿಂದ ತಮ್ಮ ಪ್ರಕೃತಿ ಪತಿಗಳನ್ನೇ ಗುರುವೆಂದು ಲಿಂಗವೆಂದು ಜಂಗಮವೆಂದು ಭಾವಿಸಿ ಪೂಜಿಸಿ ಅವರ ಪಾದ ತೀರ್ಥವನ್ನು ತಮ್ಮ ಲಿಂಗಕ್ಕೆರೆದು ಸೇವಿಸುತ್ತಾ ಮತ್ತೆ ಕೆಲಸ್ತ್ರೀಯರು ಅತಿಥಿಯ ಪಾದ ಪೂಜೆಯನ್ನು ಅವರ ತೀರ್ಥ ಪ್ರಸಾದಗಳನ್ನು ಸಹ ಬಿಟ್ಟುಕೊಟ್ಟು ಬರೀ ಮಂದಿಯ ಲಿಂಗಗಳನ್ನು ಪೂಜಿಸುತ್ತಾ ತಾವನ್ಮಾತ್ರದಿಂದ ಶಿವಾಚಾರ ಸಂಪನ್ನೆಯರೂ ಮಹಾಪತಿವ್ರತೆಯರೂ ಆಗಿರುವೆವೆಂದು ತಿಳಿದುಕೊಂಡಿರುವರೆ ಆದರೆ ಈ ಕೆಟ್ಟ ಹಾದರಗಿತ್ತಿ ಹೆಂಗಸರನ್ನಾದರೂ ವೀರಶೈವ ಮತಸ್ಥರೆಂದೆಂದಿಗೂ ಹೇಳಲಾಗುವದಿಲ್ಲಾ. ಅದೇನು ಕಾರಣವೆನೆ ಹಿಂದೆ ಜಗತ್ಪ್ರಸಿದ್ಧರಾಗಿ ಹೋದ ನಮ್ಮ ಶಿವಶರಣೆಯರಲ್ಲಿ ಯಾರಾದರೂ ಇಂಥಾ ಕೆಟ್ಟ ಪಾಪಾಚರಣೆಗಳನ್ನು ಮರೆದಾದರೂ ಮಾಡಿಲ್ಲ ಅಥವಾ ಲೋಕವಿರುದ್ಧವಾಗಿ ಆಚರಿಸುತ್ತಿರುವ ಇವರ ಆಚರಣೆಗಳನ್ನು ಸ್ವಧರ್ಮ ಶಾಸ್ತ್ರಗಳಲ್ಲಾದರೂ ಹೇಳಲ್ಪಟ್ಟಿಲ್ಲ, ಮತ್ತು ಇವರ ಮಾಯಾಜಾಲಗಳು ಲೋಕವಿರುದ್ಧವಾಗಿಯೂ ಶಾಸ್ತ್ರವಿರುದ್ಧವಾಗಿಯೂ ಇರುವವಲ್ಲದೆ. ಉಳಿದ ಈ ನಮ್ಮ ವೀರಶೈವ ಧರ್ಮ ಸ್ತ್ರೀಯರ ಬುದ್ಧಿಯನ್ನು ಕೂಡಾ ಕೆಡಿಸಿ ಬಿಡುವದಕ್ಕು ಪ್ರಕ್ರಮಿಸಿರುವವು ಆದ ಕಾರಣ ಈ ಕೆಟ್ಟ ಹಾದರಗಿತ್ತಿ ಹೆಂಗಸರನ್ನು ವೀರಶೈವ ಮತಸ್ಥರೆಂದೆಂದಿಗೂ ಹೇಳಲಾಗುವದಿಲ್ಲ.

ಕನಿಷ್ಠಾ ಮತ್ಪ್ರಿಯಾ ಪೂಜಾಮಧ್ಯಮಂ ಗುರುಪೂಜನಂ ॥ ಉತ್ತಮಂ ಜಂಗಮ ಸ್ಯಾರ್ಚಾ ತದಾರಾಧಯ ಜಂಗಮಂ ॥ ........ ಯೆಂದಿರುವ ಈ ಪ್ರಮಾಣ ವಚನದಿಂದ ನಿರಾಭಾರಿ ವೀರಶೈವರು ಲಿಂಗ ಗುರು ಮೊದಲಾದ ಸಕಲಾಶ್ರಮಿಗಳಿಂದಲೂ ದೇವದಾನ ವಾದಿಗಳಿಂದಲೂ ಸಹ ಪೂಜಿಸಿಕೊಳ್ಳುವದಕ್ಕೆ ಅತ್ಯಂತ ಅರ್ಹರೂ ಶ್ರೇಷ್ಠರೂ ಆಗಿರುತ್ತಾರೆ.

ಶಿವಾದ್ವೈತಸಿದ್ಧಾಂತಿಗಳಾದರೂ ಈ ಶಿವಲಿಂಗಪೂಜೆಗಿಂಗಿಲೂ ಅಧಿಕ ಪ್ರಾಪ್ತ ಜಂಗಮ ಪೂಜೆಯೆಂದು ಲೋಕದಲ್ಲಿ ಪ್ರಸಿದ್ಧಿಸಿರುವರು ಲಿಂಗಕ್ಕೆ ಪ್ರಾಣ ಜಂಗಮವಾಗಿರುವದರಿಂದ ಈ ವಿರಕ್ತ ಜಂಗಮರನ್ನು ಪೂಜಿಸಿ ತೃಪ್ತಿಗೊಳಿಸಿದರೆ ಸಾಕ್ಷಾದೀಶ್ವರ ನನ್ನೇ ಪೂಜಿಸಿ ತೃಪ್ತಿಗೊಳಿಸಿದಂತಾಗುವದು.

ಈ ವಿರಕ್ತ ಜಂಗಮರನ್ನು ಯಾರು ಶ್ರದ್ಧಾಭಕ್ತಿಗಳಿಂದೊಡಗೂಡಿ ಪೂಜಿಸುವದಿಲ್ಲವೋ: ಅವರು ಭೂಲೋಕದಲ್ಲಿ ವೈಭವದಿಂದ ಕೂಡಿ ಮಾಡುವ ಲಿಂಗಪೂಜೆ ಗಂಡನ ಪೂಜೆ ಸ್ತ್ರೀಪೂಜೆ ಮೊದಲಾದದ್ದು ಹೆಣದಪೂಜೆಯೆಂದು ಹೇಳಿಸಿಕೊಳ್ಳುವದು ಇದೇ ಅರ್ಥವನ್ನು ಪಂಡಿ ತಾರಾಧ್ಯರ ಚರಿತ್ರೆಯಲ್ಲಾದರೂ— ಜಂಗಮಾರ್ಚನ ಹೀನೇನ ಯತ್ಕೃತಂಲಿಂಗ ಪೂಜನಂ। ವಿಗರ್ಹಣೀಯಂ ತತ್ಪ್ರೋಕ್ತಂ ಶವಾಲಂಕಾರವದ್ಭುವಿ······ಯೆಂಬ ಪ್ರಸಿದ್ಧವಾದ ಸೂತ್ರದಿಂದ ಹೇಳಲ್ಪಟ್ಟಿರುವದು. ಹೀಗಿರುವದರಿಂದ ಈ ವಿರಕ್ತ ಜಂಗಮರಿಗಿದ್ದಷ್ಟು ಸರ್ವಾಧಿಕಾರತ್ವವೂ ಶ್ರೇಷ್ಠತ್ವವೂ ಮತ್ತಾರಿಗೂ ಇರುವದಿಲ್ಲ. ಇವರೇ ಸರ್ವಸಮಾಸ್ಯರೂ ಮೂಜಗದೊಡೆಯರೂ ಜಂಗಮೋತ್ತಮರೂ ಆಗಿರುತ್ತಾರೆ. ಹರಿಹರಬ್ರಹ್ಮಾದಿ ದೇವತೆಗಳಲ್ಲಿ ಮುಖ್ಯನಾದ ಗುರುವೆಂದರೆ ಈವಿರಕ್ತ ಜಂಗಮನೊಬ್ಬನೇ ಸರಿ ಇವನಿಗಿಂತಲೂ ಹೆಚ್ಚಾದ ಶ್ರೇಷ್ಠಗುರುವು ಮತ್ತಾವನೂ ಎಲ್ಲಿಯೂ ಇರುವದಿಲ್ಲ ಇವನೇ ಅಸಾಧಾರಣವಾದ ಮಹಿಮೆಯುಳ್ಳವನೂ ಸಕಲ ಪ್ರಾಣಿಗಳ ದುಃಖವನ್ನು ತೊಲಗಿಸುವದರಲ್ಲಿ ಸಮರ್ಥನೂ ವಿಶ್ವಕೃತೀತನು ಯೆಂದರೂ ಸಲ್ಲುವನು

ಲಿಂಗದ್ವಯಂ ಸಮಾಖ್ಯಾತಂ ಚರಂಚಾಚರ ಮೇವಚ।
ಚರಂತ್ವತಿಥಿ ವಿಖ್ಯಾತಂ ಅಚರಂ ಪಾರ್ಥಿವಾದಿಕಂ॥

ಅಂದರೆ ಲಿಂಗವು ಚರಅಚರವೆಂಬ ಭೇದದಿಂದ ಯೆರಡು ಪ್ರಕಾರವಾಗಿರುತ್ತಿಹುದು ಅಚರಲಿಂಗದಲ್ಲಿ ಹ್ಯಾಗೆ ಭಕ್ತಿಯನ್ನಿಡಬೇಕೋ ಹಾಗೆಯೇ ವಿರಕ್ತನಾದ ಜಂಗಮಲಿಂಗದಲ್ಲಿಯೂ ಕೂಡಾ ಭಕ್ತಿಯನ್ನಿಡಬೇಕು. ಮಣ್ಣು ಕಲ್ಲು ಕಟ್ಟಿಗೆ ಮೊದಲಾದ ಪದಾರ್ಥಗಳಿಂದ ಮಾಡಲ್ಪಟ್ಟ ಲಿಂಗವೇ ಅಚರಲಿಂಗವೆನಿಸಿಕೊಳ್ಳುವುದು ಅತಿಥಿಯೆಂದು ಪ್ರಖ್ಯಾತವಾದ ಲಿಂಗವೇ ಅಚರ ಜಂಗಮ ಲಿಂಗವೆನಿಸಿಕೊಳ್ಳುವುದು ಈ ಅತಿಥಿಯಾದ ವಿರಕ್ತ ಜಂಗಮಲಿಂಗವು ಅಚರಲಿಂಗಕ್ಕಿಂತಲೂ ಬಹಳ ಶ್ರೇಷ್ಠವಾದುದು

ಮತ್ತು ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಮೊದಲಾದೆಲ್ಲಿ ಆಶ್ರಮಗಳಿಗೂ ಈ ನಿರಾಭಾರಿ ವೀರಶೈವಾಶ್ರಮದವರೇ ಮುಖ್ಯಗುರುಗಳೆಂದೂ ಇವರೇ ಮಹಾ ಪುಣ್ಯಪುರುಷರುಗಳೆಂದೂ ಹೇಳುವದಕ್ಕೆ ಅನೇಕ ಶಾಸ್ತ್ರಾಧಾರಗಳುಂಟು.

ವೀರಶೈವೋತ್ಕರ್ಷ ಪ್ರದೀಪಿಕೆಯಲ್ಲಿ

ಬ್ರಹ್ಮಚಾರೀ ಗೃಹಸ್ಥಸ್ಯ ವಾನಪ್ರಸ್ಥಸ್ಯ ಭಿಕ್ಷುಕಃ ॥
ಇತಿ ವರ್ಣಾಶ್ರಮಿಃಚೇತಿ ಕ್ರಮಾಚ್ಛ್ರೇಷ್ಠಾ ವಿಚಕ್ಷಣಃ ॥
ಗೃಹಸ್ಥೋಪಿವನಸ್ಥಸ್ಯ ಯತೇರಪ್ಯಂಬುಜೇಕ್ಷಣ ।
ವಿದ್ಯೋತ್ಕರ್ಷ ಬಲೇನೈವ ಗುರುರ್ಭವತಿ ನಾನ್ಯಥಾ ॥
ವಾನಪ್ರಸ್ಥಾಶ್ರಮಸ್ಥೋಪಿತ ಥಾಸನ್ಯಾಸಿ ನೋಹರೇ ।
ವಿದ್ಯೋತ್ಕರ್ಷ ಬಲೇನೈವ ಗುರುರ್ಭವತಿ ನಾನ್ಯಥಾ ॥
ಅತಿ ವರ್ಣಾಶ್ರಮಿ ಪ್ರೋಕ್ತೋ ಗುರುಸರ್ವಾಧಿಕಾರಿಣಾಂ ।
ಸತತಸ್ಯಾಪಿ ಭವೇಚ್ಛ್ರೇಷ್ಠೋಯಥಾಹಂ ಪುರುಷೋತ್ತಮ ॥

ಕೂರ್ಮ ಪುರಾಣದಲ್ಲಿ

ಭೂಸುರೋ ಬ್ರಾಹ್ಮಣಃ ಪ್ರೋಕ್ತೋ ಭೂರುದ್ರೋಜಂಗಮಸ್ತಥಾ ।
ಸುರರುದ್ರ ದ್ವಯೋರ್ಮಧ್ಯೇ ರುದ್ರ ಏವ ವಿಶಿಷ್ಯತೇ ॥

ಕಾರಣಾಗಮದಲ್ಲಿ

ಬ್ರಹ್ಮ ವಿಷ್ಣು ಸುರೇಂದ್ರಾದ್ಯೈರ್ವಂದ್ಯ ಮಾನಪದದ್ವಯಂ ।
ವೇದಾಗಮಾರ್ಥ ನಿರತಮುತ್ತಮಂ ಜಂಗಮ ಸ್ಥಲಂ ॥

ವೀರಾಗಮದಲ್ಲಿ

ನಿರಾಮಯಂ ನಿರಾಭಾಸಂ ನಿಷ್ಪ್ರಪಂಚಂ ನಿರಂಜನಂ ।
ಸರ್ವ ಸ್ವಭಾವ ಸಂಪನ್ನ ಮುತ್ತಮಂ ಜಂಗಮಸ್ಥಲಂ ॥

ಪರಮ ರಹಸ್ಯದಲ್ಲಿ

ಮದ್ರೂಪಂ ಜಂಗಮಂ ದೇವಿ ಮಮಪ್ರಾಣಂ ಮಮಾಧಿಕಂ ।
ಮದ್ಗುರುಶ್ಚ ಮದಂ ಗಂಚಮನ್ನಾಥಂ ಚರಲಿಂಗಕಂ ॥

ಕೂರ್ಮ ಪುರಾಣದಲ್ಲಿ

ಮೂಲ ಮೂರ್ತಿರ್ಮಹಾದೇವೋ ವೇದವೇದ್ಯಸ್ಸದಾಶಿವಃ ।
ಆದಿಕರ್ತಾ ಜಗನ್ನಾಥೋ ವರ್ಣಾನಾಂ ಜಂಗಮೋಗುರುಃ

ಸೂತಸಂಹಿತೆಯಲ್ಲಿ

ಜಕಾರೋ ಗುರುರೂಪಂ ಚಗಕಾರೋಲಿಂಗ ಮುಚ್ಯತೇ ।
ಮಕಾರೋ ಜಂಗಮಜ್ಞೇಯಃ ತ್ರಿಮೂರ್ತ್ಯಾತ್ಮಕ ಜಂಗಮಃ ॥

ಶೈವರತ್ನಾಕರದಲ್ಲಿ

ಈಶಪ್ರಾಣಮಯಂ ಲಿಂಗಂ ಲಿಂಗಪ್ರಾಣೋಗುರುರ್ಭವೇತ್ ।
ಗುರುಪ್ರಾಣಶ್ಚ ರೋಯಸ್ಮಾತ್ತಸ್ಮಾ ಜಂಗಮ ಪೂಜನಂ ॥

ಪರಮ ರಹಸ್ಯದಲ್ಲಿ

ಲಿಂಗಾರ್ಪಿತಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಪಿತಂ ।

ಲಿಂಗಜಂಗಮಯೋರ್ಮಧ್ಯೇ ಜಂಗಮಸ್ತು ವಿಶಿಷ್ಯತೆ ॥

ಸ್ಕಾಂಡ ಪುರಾಣದಲ್ಲಿ

ಪುನಃ ಪೀಡಾಚ ಶೋಕಶ್ಚ ಗತಾಗತ ವಿಚಾರಣಾ ।
ವರ್ಜನೀಯಾ ಮಹಾದೇವಿ ಉತ್ತಮಂ ಜಂಗಮಸ್ಥಲಂ ॥

ಕಿರಾಗಮದಲ್ಲಿ

ಅಹಿಂಸಾ ನಿಂದಿತಂ ಚೈವ ಪುಮಾಯಂ ಸಮದರ್ಶನಂ ।
ನಿರುಪಾಧಿನಿರಾಪೇಕ್ಷಂ ಸ್ವತಂತ್ರಂ ಜಂಗಮಸ್ಥಲಂ ॥

ಸೂತಸಂಹಿತೆಯಲ್ಲಿ

ಯಥಾರಾಜಾ ಜನೈಃ ಸರ್ವೈಃ ಪೂಜ್ಯತೆ ಮುನಿಸತ್ತಮಾಃ ॥
ತಥಾಯೋಗೀಸ ದಾದೇವೈರ್ಮುನಿಭಿಃ ಪೂಜ್ಯಏವಹಿ ॥

ಇತ್ಯಾದ್ಯನೇಕ ಪ್ರಮಾಣಗಳ ಹೋರಾತ್ರ ಸ್ಯಬಿಡದೆ ಇಾಗಿ ಹೇಳುತ್ತಿರುವಲ್ಲಿ ಜಗದುದ್ಧಾರಕರಾದ ಈ ನಿರಾಭಾರಿ ವೀರಶೈವರ ಗುರುತ್ವದ ಪ್ರಭಾವವನ್ನು ಹೆಚ್ಚು ಮಾತಿನಿಂದ ಹೇಳುವದೇನು ಈ ಗುರುತ್ವದ ದೃಷ್ಟಾಂತವು ಇಲ್ಲಿಗೆ ಸಾಕು ಇನ್ನು ಈ ಅತಿಥಿಗಳಲ್ಲೇ ಪಟ್ಟಚರ ಪತಿ ಮೊದಲಾದ ಸಕಲಾಶ್ರಮದವರು ಪಾದೋದಕ ಪ್ರಸಾದಗಳನ್ನು ಗ್ರಹಿಸಬೇಕೆಂದೂ ಇ ಅತಿಥಿಯ ಪಾದೋದಕ ಪ್ರಸಾದಗಳೇ ಈ ಪಟ್ಟಚರಪತಿ ಮೊದಲಾದವರ ಪಾದೋದಕ ಪ್ರಸಾದಗಳಿಗಿಂತಲೂ ಅತ್ಯುತ್ತಮವಾದವುಗಳೆಂದೂ ಹೇಳತಕ್ಕ ಪ್ರಮಾಣಗಳನ್ನು ಇಗ ಇಲ್ಲಿ ಕೆಲಂಚ ಉದಾಹರಿಸಲ್ಪಡುತ್ತೆ.

ಕ್ರಿಯಾಸಾರದಲ್ಲಿ

ಗುರುಲಿಂಗ ಚರಾಣಾಂಚ ಸಮವಾಯೇತು ಭಕ್ತಿಮಾನ್ ।
ಪಾದೋದಕಂಚರಾಲ್ಲ ಬ್ಧ್ವಾ ಗುರೋರ್ಲಿಂಗಸ್ಯ ಭಕ್ತಿಮಾನ್ ॥
ಅಶ್ನೀಯಾದಶನಂ ಭಕ್ತೇರನ್ಯಥಾ ನಶೇಸಂ ಭವೇತ್ ।

ವೀರಶೈವಾಚಾರ ಪ್ರದೀಪಿಕೆಯಲ್ಲಿ

ಗುರುಜಂಗಮಯೋರ್ಯತ್ರ ಸಾನ್ನಿಧ್ಯೇಸತಿ ಭಕ್ತಿಮಾನ್
ಜಂಗಮಸ್ಯೈವ ಪಾದಾಂಬು ಪ್ರಸಾದಂ ಗ್ರಹಣಂವಿಧಿಃ॥

ವೀರಶೈವೋತ್ಕರ್ಷ ಪ್ರದೀಪಿಕೆಯಲ್ಲಿ

ಇತಿಹಾಸ ಪುರಾಣೇಷು ಶಿವಸ್ಯಾಪ್ಯತಿಥೇರ್ಗುರೋಃ॥
ಅತಿಥೇಃ ಪಾದಸಲಿಲಮ ಧಿಕಂ ಹಿಜಗತ್ರಯೆ ॥

ಸ್ಕಾಂದ ಪುರಾಣದಲ್ಲಿ

ಮಾರ್ಗಾದಿ ತ್ರಿಕಶ್ಶೈವಾನಾಂತೀರ್ಥಂಚ ದರ್ಶಿತಂಮಯಾಃ
ದ್ವಿಭೇದವೀರಶೈವಾನಾಂ ಮತ್ತಮಂಚ ರತೀರ್ಥಕಂ ॥

ಬ್ರಹ್ಮಾಂಡಪುರಾಣದಲ್ಲಿ

ಜಂಗಮಸ್ಯಪಾದತೀರ್ಥಂ ಲಿಂಗಮಜ್ಜನ ಮುತ್ತಮಂ।
ತತ್ಪ್ರಸಾದಂ ಮಹಾದೇವಿ ನೈವೇದ್ಯಂ ಶುಭಮಂಗಲಂ॥

ಸ್ಕಾಂದ ಪುರಾಣದಲ್ಲಿ

ಲಿಂಗಸ್ಯ ಚೇತನಂ ಕೃತ್ವಾ ಜಂಗಮಸ್ಯ ಪ್ರಸಾದತಃ।
ಚರೋಚ್ಛಿಷ್ಟಂ ವಿನಾಪತ್ನಾಸಚಲಿಂಗಂ ನಚಕ್ರಿಯಾ

ಇತ್ಯಾದಿ ಕ್ರಿಯಾಸಾರಸ್ಕಾಂದ ಪುರಾಣ ವೀರಶೈವೋತ್ಕರ್ಷ ಪ್ರದೀಪಿಕೆ ಮೊದಲಾದ ಗ್ರಂಥಗಳು ಹೀಗೆ ಪ್ರಶಂಶ ಮಾಡುತ್ತಿರ. ಪದರಿಂದ ಅತಿಥಿಗಳಾದ ಈ ವಿರಕ್ತಜಂಗಮರ ಪಾದೋದಕ ಪ್ರಸಾದಗಳು ಈಪಟ್ಟಚರಪತಿ ಮೊದಲಾದವರ ಪಾದೋದಕ ಪ್ರಸಾದಗಳಿಗಿಂತಲೂ ಅತ್ಯಂತ ಶ್ರೇಷ್ಠವಾಗಿರುವವು

ಈ ವೀರಶೈವ ಮತದಲ್ಲಿ ಸಹಜಾಚರಣೆ ಸಂಬಂಧಾಚರಣೆಯೆಂಬ ಯೆರಡುವಿಧವಾದ ಆಚರಣೆಗಳ ಂಟು

ಸಹಜಾಚರಣೆಯೆಂದರೆ ಗುರುಲಿಂಗ ಜಂಗಮ ಈ ಮೂರು ಒಂದೇ ಸ್ಥಲದಲ್ಲಿ ಕೇರಿಇದ್ದ ಕಾಲದಲ್ಲಿ ಈ ವಿರಕ್ತಜಂಗಮರಲ್ಲಿ ಪಾದೋದಕ ಪ್ರಸಾದಗಳನ್ನು ಸೇವಿಸುವ ಆಚರಣೆಗೆ ಸಹಜಾಚರಣೆ ಯೆಂದು ಹೆಸರು

ಸಂಬಂಧಾಚರಣೆ ಯೆಂದರೆ ವಿರಕ್ತನಾದ ಜಂಗಮನು ಸಿಕ್ಕದಿರುವ ಕಾಲದಲ್ಲಿ ವಿರಕ್ತಜಂಗಮನನ್ನು ಗುರು ಮತ್ತು ಲಿಂಗದಲ್ಲಿ ಅಂತರ್ಭಾವ ಮಾಡಿಕೊಂಡ ಆಚರಿಸುವ ಆಚರಣೆಗೆ ಸಂಬಂಧಾಚರಣೆ ಯೆಂದು ಹೆಸರು

ಈ ಸಂಬಂಧಾಚರಣೆಯಲ್ಲಿ ಅತಿಥಿಯಾದ ಈ ವಿರಕ್ತ ಜಂಗಮನನ್ನು ಗುರುಅಥವಾ ಲಿಂಗದಲ್ಲಿ ಅಂತರ್ಭಾವಮಾಡಿಕೊಳ್ಳದೆ ಹೋದರೆ ಪಾದೋದಕ ಪ್ರಸಾದಗಳೇ ಆಗುವದಿಲ್ಲವೆಂದು ಈಕ್ರಿಯಾಸಾರದ ವಚನವು ಹೀಗೆ ಹೇಳುತ್ತಿದೆ— ತೃತೀಯಂ ಯಸ್ಯ ಲಕ್ಷ್ಯತೇ ತದಾತ್ಮನಶನಂ ಪ್ರೋಕ್ತಂ……

ಇಂತು ಸಹಿತವ ಪ್ರಮಾಣಗಳ ಮೇಲಿಂದ ಸರ್ವಾರಂಭಗಳನ್ನು ಪರಿತ್ಯಾಗ ಮಾಡಿಬಿಟ್ಟ ವಿರಕ್ತ ಜಂಗಮರಲ್ಲಿ ಸಾಮಾನ್ಯ ವಿಶೇಷ ಮೊದಲಾದ ಸಕಲ ವೀರಶೈವರಿಂದಲೂ ಪಂಚಪೀಠಾಧೀಶ್ವರರಿಂದಲೂ ಒಳ್ಳೇರಾಜಾಧಿರಾಜರಿಂದಲೂ ಸಾರ್ವಜನರಿಂದಲೂ ಪೂಜಿಸಿಕೊಳ್ಳುವ ಮಹಾ ಗುರುತ್ವವೂ ಸರ್ವೋತ್ತಮೋತ್ತಮವಾದ ಜಂಗಮತ್ವವೂ ಯಲ್ಲಕ್ಕೂ ಮೇಲಾದ ಶಿವಯೋಗ ಸಂಪತ್ತಿಯೂ ಪರಬ್ರಹ್ಮತ್ವವೂ ಇರುವದೆಂದು ಸಕಲ ಶಿವಾದ್ವೈತಪಂಡಿತರಿಗೂ ನಿಸ್ಸಂಶಯವಾಗಿ ತಿಳಿದು ಬರುತ್ತಿದೆ ಆದಕಾರಣವೇ ನೀಲಕಂಠಶಿವಾಚಾರ್ಯರು ತಮ್ಮಿಂದುಕ್ತವಾದ ಕ್ರಿಯಾಸಾರದಲ್ಲಿ ಗುರುಜಂಗಮರ ಅಧಿಕಾರವನ್ನು ವಿವರಿಸುವಾಗ್ಗೆ - ಚರಮೂರ್ತೇರ್ಗುರುತ್ವಂತು ಗುರೋರಪ್ಯಧಿಕಂಭವೇತ್………… ಯೆಂದು ಹೇಳಿಸಿ ವ್ಯಾಖ್ಯಾನಿಸಿದ್ದಾಗೆ ಇವೆಲ್ಲವಿಚಾರಗಳಿಂದ ಪಂಚಸಿಂಹಾಸನಾಧಿಪತಿಗಳಿಗೂ ಪಟ್ಟಚರ

ಪತಿಗಳಿಗೂ ಇತರರಿಗೂ ಸಹಸಿರಾಭಾರಿ ವೀರಶೈವರೇ ಗುರುಗಳಾಗಿರುವರೆಂತಲೂ ಇವರೇ ಅಷ್ಟಾವರಣಾಂತರ್ಗತ ಜಂಗಮರಾಗಿರುವರೆಂತಲೂ ಇವರತೀರ್ಥ ಪ್ರಸಾದಗಳೇ ಅತ್ಯುತ್ತಮವಾದವುಗಳೆಂತಲೂ ಹೇಳಲು ಯಾವ ಅಭ್ಯಂತರವೂ ಇರುವದಿಲ್ಲ.

ಈ ನಿರಾಭಾರಿ ವೀರಶೈವರು ಮತ್ತಾವ ಅಕ್ಷರ ವಿಗಳನ್ನು ಪೂಜಿಸತಕ್ಕವರಲ್ಲ ನಿರಾಭಾರಿ ವೀರಶೈವರಿಗೆ ನಿರಾಭಾರಿವೀರಶೈವರೇ ಗುರುಗಳು ಈ ಮಾತಿನಲ್ಲಿ ಸಂಶಯವೇನೂ ಇರುವದಿಲ್ಲ ಇದೇ ಅರ್ಥವನ್ನು — ಸ್ವಯಮೇವಮುಕ್ತೀ ನಾಂತು ಯತೇ ರ್ಗುರುರಥಾ ಪಿವಾ...... ... ಯಂಬೀಕ್ರಿಯಾಸಾರದ ವಚನದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ ಹೀಗೆ ಅಕ್ರಿಯಾಸಾರಸಿದ್ಧಾಂತ ಶಿಖಾಮಣಿ ಮೊದಲಾದ ಸ್ವಧರ್ಮಶಾಸ್ತ್ರವಚನಗಳು ಪ್ರಸಿದ್ಧವಾಗಿರುವಾಗ ಈ ವಿರಕ್ತ ಜಂಗಮರಿಗೆ ಗುರುವರ್ಗದ ಪಟ್ಟಚರಪತಿಗಳೇ ಗುರುಗಳಾಗುತ್ತಾರೆ ಪಟ್ಟಚರಪತಿಗಳೇ ಅಷ್ಟಾವರಣಾಂತರ್ಗತ ಜಂಗಮರಾಗುತ್ತಾರೆ ಹಾಗೆ ಯಂದು ಹೇಳಲಾದೀತೆ ಅರೆ ಮರುಳರಿದೊಂದನ್ನು ಕಾಣದೆ ತೆರೆದ ಬಾಯಿ ಮುಚ್ಚದ ಹಾಗೆ ಬಗುಳುತ್ತಿರುವ ಹುಚ್ಚುನಾಯಿಯಂತೆ ವಿರಕ್ತಜಂಗಮರನ್ನು ಗುರುದ್ರೋಹಿಗಳೆಂದು ಮೊದಲಾಗಿ ಕರೆದು ನಾನಾವಿಧವಾಗಿ ನಿಂದಿಸುತ್ತಾ ಸತ್ಪುರುಷರ ತಲೆಗೆಲ್ಲಾ ಚಿಟ್ಟನ್ನು ಹಿಡಿಸಿ ತಮ್ಮ ಅಯೋಗ್ಯತೆಯನ್ನೇ ಪ್ರಕಾಶಪಡಿಸಿಕೊಂಡಿದ್ದಾರೆ ಇಂಥಾ ದುಷ್ಕರ್ಮಪರಾಯಣರಾದ ಸಜ್ಜನರಿಗೆ ಅಹಿತರಾದ ಈ ಮಾನಹೀನರ ಪಾಪಕ್ಕೆ ಪ್ರತೀಕಾರ ಉಂಟೆ ಅಲೋಕದವರೂ ಈ ಲೋಕದವರೂ ಸಹ ಶಿವನ ಆಜ್ಞಾನುಸಾರವಾಗಿ ವರ್ತಿಸುತ್ತಿರುವದರಿಂದ ಶಿವನೇ ಈ ಭುವನ ಬ್ರಹ್ಮಾಂಡಗಳಿಗೆಲ್ಲಾ ಅಧಿಪತಿಯಾಗಿಯೂ ಸಕಲಜನರಿಂದಲೂ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನೂ ಜಗದ್ರಕ್ಷನೂ ಆಗಿರುತ್ತಾನೆ ಅಂತಹ ಸಮರ್ಥನಾದ ಪರಶಿವನಿಗೆ ಯಾರು ಮುಖ್ಯ ಗುರುಗಳಾಗಿರುವರೋ ಅವರೇ ಈ ಸಕಲಭುವನ ಬ್ರಹ್ಮಾಂಡಗಳಿಗೆಲ್ಲಾ ಮುಖ್ಯ ಗುರುಗಳಾಗಿರಬೇಕು ಅವರ ಹೊರತು ಇತರರು ಅದು ಹೇಗೆ ಮುಖ್ಯಜಗದ್ಗುರುಗಳಾಗುವರು ಇತರರಿಗೆ ಜಗದ್ಗುರುತ್ವವೂ ಸರ್ವಸ್ವತಂತ್ರತ್ವವೂ ಅದು ಹೇಗೆ ತಾನೆ ಸಂಭವಿಸುವದು ಈ ಲೋಕದಲ್ಲಿ ಸರ್ವಸ್ವತಂತ್ರ ಪಟ್ಟವನ್ನು ಕಟ್ಟಿಕೊಂಡು ನಿಖಿಲಾಮರವಲ್ಲಭನಾದ ಪರಮೇಶ್ವರನಿಂದಲೂ ಇತರ ದೇವತಾಶ್ರೇಷ್ಠರಿಂದಲೂ

ಬ್ರಹ್ಮ ಕ್ಷತ್ರಿ ವೈಶ್ಯ ಶೂದ್ರ ಮೊದಲಾದ ಕುಲಹದಿನೆಂಟು ಜಾತಿಯವರಿಂದಲೂ ಬಿಲೈಸಿಕೊಳ್ಳುತ್ತಿರುವವರು ಜಗದ್ಗುರುಗಳೊ ಅಥವಾ ಅಲ್ಲಸ್ವತಂತ್ರಪಟ್ಟವನ್ನು ಕಟ್ಟಿಕೊಂಡು ಶಿವಜಂಗಮರಾಜ್ಞಾವಶಂಗತರಾಗಿ ವರ್ತಿಸುತ್ತಾ ತಮ್ಮ ಶಿಷ್ಯ ಮಂಡಳಿಯವರಿಂದ ಮಾತ್ರ ಅರ್ಚಿಸಿಕೊಳ್ಳುತ್ತಿರುವವರು ಜಗದ್ಗುರುಗಳೋ ಇದಕ್ಕೆ ಪ್ರತ್ಯುತ್ತರವನ್ನು ಈ ಪಂಚಸಿಂಹಾಸನಾಧಿಪತಿಗಳೇ ಹೇಳಬೇಕು ಕಾರಣವೇನೆಂದರೆ ಈ ವಿರಕ್ತ ಜಂಗಮರು ಪೂಜ್ಯರಲ್ಲವೆಂಬ ಕಲಹವನ್ನು ಯಾರು ಈ ಭೂಲೋಕದಲ್ಲಿ ಆರೋಪಣೆ ಮಾಡಿದರು ಈ ವಿರಕ್ತ ಚರಮೂ

ರ್ತಿಗಳಿಗೆ ಗುರುಸ್ಥಲದ ಪಟ್ಟಚರಪತಿಗಳೇ ಗುರುಗಳಾಗುತ್ತಾರೆಂಬ ಅನ್ಯಾಯದ ಮಾತನ್ನು ಯಾರು ಬರೆದು ತೋರಿಸಿದರು. ವೀರಶೈವ ಮತದಲ್ಲಿ ಯಾಈ ಈ ಅವಿವೇಕ ಅನಾಚಾರಗಳನ್ನು ಬಿತ್ತಿದರು ಯಾರು ಈ ವೀರಶೈವ ಮತವನ್ನು ಪಾತಾಳಕ್ಕೆ ಹಾಕಿ ಮುರಿದು ಮೂಲೆಗೊತ್ತಿಟ್ಟು ಬಿಟ್ಟರು ಈ ಪಂಚಸಿಂಹಾಸನಾಧಿಪತಿಗಳಲ್ಲವೆ ಹೌದು ಅದು ಕಾರಣ ಈಗ ಈ ನಮ್ಮ ಮತದಲ್ಲಿ ಹುಟ್ಟಿರತಕ್ಕ ಅನಾಚಾರಕ್ಕೂ ಕಲಹಕ್ಕೂ ಈ ಪಂಚಸಿಂಹಾಸನಾಧಿಪತಿಗಳೇ ಕಾರಣಭೂತರು ಇವರನ್ನು ಬಿಟ್ಟರೆ ಬೇರೆ ಇಲ್ಲ ಸ್ವಮತೋದ್ಧಾರ ಮಾಡಬೇಕೆಂಬ ಸದಭಿಪ್ರಾಯವೂ ಅಷ್ಟಾವರಣಗಳ ನಿಜಸ್ವರೂಪವೂ ಈ ಪಂಚಸಿಂಹಾಸನಾಧಿಪತಿಗಳಲ್ಲಿ ಚನ್ನಾಗಿ ಮೂಡಿದ್ದರೆ ಈ ನಮ್ಮ ವೀರಶೈವ ಮತದಲ್ಲಿ ಇಂಥಾ ಅನಾಚಾರಗಳೂ ಕಲಹಗಳೂ ಎಂದಿಗೂ ನಡೆಯುತ್ತಿರಲಿಲ್ಲಾ ಒಂದುವೇಳೆ ಇತರರಲ್ಲೇ ಅತೆರದ ಮನೋಭಾವವು ದುರಾಚಾರಗಳೂ ಮೂಡಿದ್ದವೆಂದು ಇಟ್ಟುಕೊಂಡರೆ ಅದಕ್ಕೆ ತಕ್ಕ ಶಿಕ್ಷೆಯನ್ನು ತಿಳವಳಿಕೆಯನ್ನು ಕೊಟ್ಟು ಅವರನ್ನೆಲ್ಲಾ ವಿಚಕ್ಷಣರನ್ನಾಗಿ ಮಾಡುವದಕ್ಕೆ ಇವರು ಶಕ್ತರೇ ಆಗಿದ್ದರು ಹಾಗೇನೂ ಇವರು ಮಾಡಲಿಲ್ಲಾ ಅದಕ್ಕೆ ಪ್ರತಿಯಾಗಿ ತಾವೂ ಕೂಡಾ ಸ್ವೇಚ್ಛಾಚಾರಿಳಾಗಿ ಈ ಧೂರ್ತ ಪಂಡಿತರನ್ನೆಲ್ಲಾ ಬೆನ್ನಿಗೆ ಕಟ್ಟಿಕೊಂಡು ಮನಬಂದಂತೆ ಕುಣಿದಾಣಿ ಕ್ರಮದಪ್ಪಿ ನಡೆಯುತ್ತಾ ವಿರಕ್ತ ಜಂಗಮರಿಗೆ ಅವಾಚ್ಯ ಮಾತುಗಳನ್ನಾಡಿ ಆಡುತ್ತಿರುವ ಕಾರಣ ಈ ವಿಷಯಲ್ಲಿ ಇವರ ಉತ್ತರವಾದಿತ್ವವನ್ನು ಈ ಪಂಚಸಿಂಹಾಸನಾಧಿಪತಿಗಳು ಯಂದಿಗೂ ತಪ್ಪಿಸಿಕೊಳ್ಳಲಾಗುವದಿಲ್ಲಾ ಈ ಅನಂತ ವಿದವಾ ಹಾಗಿರಲಿ

ಮತ್ತಂ ಅದೃಷ್ಟಹೀನರಾದ ಈ ಕಡುಮೂರ್ಖ ಜನರು ಅಲಂಗೀ ಸನ್ಯಾಸಿಗಳಿಗೂ ವೀರಶೈವಲಿಂಗೀ ಸನ್ಯಾಸಿಗಳಿಗೂ ಇರತಕ್ಕ ವ್ಯತ್ಯಸ್ತವನ್ನೋದಿ ತಿಳಿಯದೆ ಎಲ್ಲೋ ತಲೆತಿರುಕರ ಮಾತನ್ನು ಕೇಳಿ ಆಪ್ತವಾಕ್ಯವನ್ನೊಪ್ಪದೆ ಛಲದಿಂದ ಕೂಡಿ ನಿರಾಭಾರಿ ವೀರಶೈವರೀ ಶಾಲ್ಯಾನ್ನವನ್ನು ತುಪ್ಪವನ್ನು ಸೇವಿಸಕೂಡದು ಭಕ್ತಾದಿಗಳ ಮನೆಗಳಲ್ಲಿ ಏಕಾನ್ನಪಂ ಗ್ರಹಿಸಕೂಡದು ಗಜಾಶ್ವಾದಿವಾಹನಗಳನ್ನೇರಕೂಡದು ಸ್ತ್ರೀಯರ ಮುಖವಂ ನೋಡಕೂಡದು ಹಾಗೆಎಂದು ಬರೀವ್ಯರ್ಥ ವಾದವಿವಾದವನ್ನು ಮಾಡುತ್ತಲಿದ್ದಾರಷ್ಟೆ ಆದರೆ ಈ ವಿವಾದವಾದರೂ ಮೊದಲೀದ ಕಡೆವರೆಗೂ ಅನ್ಯತಮಯುವೂ ಸ್ವಮತಕ್ಕೆ ಭಂಗಕರವೂ ಆಗಿರುವದೆಂದು ತೋರಿಬರುತ್ತಿದೆ ಅದು ಹೇಗೆಂಬರೆ

ವೀರಶೈವ ಧರ್ಮ ಶಿರೋಮಣಿಯಲ್ಲಿ

ಖಟ್ವಾರೋಹಂದಿವಾಸಿದ್ರಾಂ ತಾಂಬುಲಾಭ್ಯಂಗ ವಿಗ್ರಹಾನ್ ।
ಸುವರ್ಣಂ ಶುಕ್ಲವಾಸ ಶ್ಚಾಪ್ಯಲಿಂಗೀವರ್ಜಯೇದ್ಧೃತಿಃ॥
ಏಕತ್ರವಾಸ ಮೇಕಾನ್ನಂ ರಸವಜ್ಜನ ಸಂಗಮಂ ॥

ಸವಾಣಿ ಮುತ್ಸವಾ ಲೋಕಂಚಾ ಲಿಂಗೀವರ್ಜಯೇದ್ಯತಿಃ ॥
ದ್ವಿರನ್ನ ಮೈಚ್ಛಿಕ ಕ್ಷೌರಂ ಲೋಹ ಪಾತ್ರೇಷುಭೋಜನಂ।
ತದೈಚ್ಛಿಕ ಜಲಸ್ನಾನ ಮಲಿಂಗೀ ವರ್ಜಯೇತ್ಯತಿಃ ॥
ಅಲಿಂಗೀಯತಿ ನೋದೇವಿ ಬುಹು ಕ್ಲೇಶಾಸ್ಸವಿವರಿತಾಃ ॥

ಅಂದರೆ ಅ ಲಿಂಗೀಸ ನ್ಯಾಸಗಳು ಮಂಚವನ್ನು ದಿವಾನಿದ್ರೆಯನ್ನು ತಾಂಬೂಲವನ್ನು ಕಲಹವನ್ನೂ ಸುವರ್ಣವನ್ನೂ ಅಭ್ಯಂಜನಸ್ನಾನವನ್ನೂ ಬಿಳಿಯ ವಸ್ತ್ರಗಳನ್ನು ಏಕತ್ರ ವಾಸವನ್ನು ವಿಷಯವನ್ನು ಕಾಮುಕರ ಸ್ನೇಹವನ್ನು ಲೋಹಪಾತ್ರೆಯಲ್ಲಿ ಭೋಜನವನ್ನು ಸ್ವೇಚ್ಛಾ ಕ್ಷೌರವನ್ನು ಉತ್ಸವದಹಂಬಲವನ್ನು ದ್ವಿವಾರ ಭೋಜನವನ್ನು ಯಥೈಚ್ಛಿಕ ಜಲಸ್ನಾನವನ್ನು ಇವೆಲ್ಲವನ್ನು ತ್ಯಜಿಸಿ ಬಿಡಬೇಕೆಂದು ಹೇಳಿ.

ಅದೇ ವೀರಶೈವ ಧರ್ಮ ಶಿರೋಮಣಿಯಲ್ಲಿ.

ನಿವೃತ್ತಿ ವೀರಶೈವ ಸ್ಯ ಲಿಂಗೀ ನೋಲಿಂಗತಃ ಸುಖಂ |
ಶರೀರ ಕ್ಲೇಶಸಹನಂ ನವ್ರತಾದಾವು ಪೋಷಣಂ।
ನದ್ವಂ ದ್ವಸಹನಂ ಭದ್ರೇ ವೀರಶೈವ ಸ್ಯಲಿಂಗಿನಃ |
ಅಸ್ನಾತೋವಾಪಿ ಶುದ್ಧೋವಾ ಖಟ್ವಾಯಾ ಮುಪವಿಸ್ಯವಾ |
ಪೂಜಾಯಾಂ ಮಮಲಿಂಗಸ್ಯ ಮಾಮೇವೈತಿನ ಸಂಶಯಃ ॥

ಅಂದರೆ ವೀರಶೈವಲಿಂಗೀ ಸನ್ಯಾಸಿಗಳು ಅ ಲಿಂಗೀ ಸನ್ಯಾಸಿಗಳಿಗೆ ಹೇಳಲ್ಪಟ್ಟಂಥಾ ನಿಯಮಂಗಳ ಕಡೆ ಲಕ್ಷಕೊಡದೆ ಶಿವಾಚಾರಕ್ಕೆ ವಿರುದ್ಧವಾದ ವ್ರತೋಪವಾಸಗಳನುಳಿದು ಶರೀರವನ್ನು ಬಹಳವಾಗಿ ಬಳಲಿಸದೆ ಯಥೈಚ್ಛಿಕ ಜಲಸ್ನಾನ ಭಸ್ಮಸ್ನಾನಂಗಳನ್ನಾಚರಿಸಿ ಮಂಚಪೀಠಾದಿಗಳನ್ನು ಪಯೋಗಿಸಿಕೊಂಡು ಶಿವಪೂಜೆಯಂ ಮಾಡುತ್ತಾ ಲಿಂಗಭೋಗೋಪ ಭೋಗಿಯಾಗಿರಬೇಕೆಂದು ಹೇಳಲ್ಪಟ್ಟಧೆ ಈ ರೀತಿಯಾಗಿ ಅಲಿಂಗೀ ಸನ್ಯಾಸಿಗಳ ಧರ್ಮಕ್ಕೂ ವೀರಶೈವ ಲಿಂಗೀ ಸನ್ಯಾಸಿಗಳ ಧರ್ಮಕ್ಕೂ ಎಷ್ಟೋ ವ್ಯತ್ಯಸ್ತವಿರುವದರಿಂದ ಅವರ ಧರ್ಮವೂ ಇವರ ಧರ್ಮವೂ ಒಂದೇಯೆಂದು ಹೇಳುವವರ ಮಾತು ಈ ನಮ್ಮ ವೀರಶೈವ ಸಿದ್ಧಾನ್ತಕೆ ಸಲ್ಲದು

ಮತ್ತು ಈ ಭೂಲೋಕದಲ್ಲಿರುವ ಎಲ್ಲಾ ಪ್ರತಿವಾದಿಗಳನ್ನು ಗೆದ್ದು ಶ್ರೇಷ್ಠತರವಾದ ಕೀರ್ತಿಯಿಂ ದೊಪ್ಪುತ್ತಿರುವ ಶ್ರೀಪತಿ ಪಂಡಿತರಾದರೂ ತಮ್ಮಿಂದುಕ್ತವಾದ ಶ್ರೀಕರ ಭಾಷ್ಯದಲ್ಲಿ——ಸನ್ಯಾಸೀ ನಿಷೇಧಾಗಮ ವಾಕ್ಯಾನಾಂ ಜಾತ್ಯಂಶರ ವಿಷಯತ್ವ ಮಿತಿವೇದಿತವ್ಯಂ......ಎಂದು ಹೇಳಿ ಸಿದ್ಧಾನ್ತಿಸಿ ಬಿಟ್ಟದ್ದಾಗಿ ಆದುದರಿಂದಲೂ ಈ ನಮ್ಮ ವೀರಶೈವ ಲಿಂಗೀ ಸನ್ಯಾಸಿಗಳಿಗೆ ಯಾವ ವಿಧದ ನಿಷೇಧವೂ ನಿಜವಾಗಿರುವದಿಲ್ಲ.

ಪಾರಮೇಶ್ವರಾಗಮದಲ್ಲಿ ಸ್ತ್ರೀಯೋವಾ ಪುರುಷಾ

ವಾಪಿ ಸರ್ವತ್ರಾತಿಥಿ ಪೂಜನೇ...... ಯೆಂದೀ ಪ್ರಕಾರವಾಗಿ ಹೇಳಿರುವದ ರಿಂದ ಸ್ತ್ರೀಪುರುಷರು ಸಹಿತವಾಗಿ ಅತಿಥಿಗಳನ್ನು ಪೂಜಮಾಡಬೇಕೆಂಬ ಧರ್ಮ ವು ಸಿದ್ಧವಾಗಿಯೇಇದೆ ಹೀಗೆವೀರಶೈವ ಸ್ತ್ರೀಪುರುಷರುಸಹಿತವಾಗಿಅತಿಥಿಗಳನ್ನು ಪೂಜೆಮಾಡಬೇಕೆಂದು ಪ್ರಮಾಣಗಳಿರುವಾಗ ವಿರಕ್ತ ಜಂಗಮರು ಸ್ತ್ರಿಯರ ಮುಖವನ್ನು ನೋಡಕೂಡದು ಅವರೊಡನೆ ಮಾತನಾಡಕೂಡದು ಹಾಗೆ ಎಂ ದು ಹೇಳತಕ್ಕಂಥಾ ಮಾತು ಶುದ್ಧ ತಪ್ಪಾದ ಮಾತಾಗಿರುತ್ತಿದೆ ಪೂರ್ವದಲ್ಲಿ ಉತ್ತಮರಾದ ಅಕ್ಕ ನಾಗಮ್ಮಾ ನೀಲಮ್ಮಾ ನಿಂಬೆಮ್ಮಾ ಈ ಮೊದಲಾದ ನಮ್ಮ ಶಿವಶರಣೆಯರಾದ ವೀರಶೈವ ಸ್ತ್ರೀಯರೆಲ್ಲರೂ ಅತ್ಯಂತ ಪ್ರೀತಿಯಿಂದ ಅತಿಥಿ ಗಳಾದ ವಿರಕ್ತ ಜಂಗಮರ ಪಾದವನ್ನು ಪೂಜೆ ಮಾಡುವದರಿಂದಲೂ ಅವರ ಪಾದವನ್ನು ಧ್ಯಾನಮಾಡುವದರಿಂದಲೂ ಪಾದೋದಕ ಪ್ರಸಾದಗಳನ್ನು ಸೇವಿಸುವದರಿಂದಲೂ ಮುಖ್ಯ ಧರ್ಮ ಕರ್ತ್ರಗಳಾಗಿ ಚತುರ್ದಶ ಭುವನಗಳನ್ನು ಕೇಳುವಂತೆ ಮಾಡಿರುತ್ತಾರೆ ಅವರೆಲ್ಲರೂ ಈ ನಮ್ಮ ವೀರ ಶೈವಧರ್ಮಸ್ತ್ರೀಯರಲ್ಲವೆ ಇವನ್ನೆಲ್ಲಾ ವಿಚಾರ ಮಾಡಿ ನೋಡದೆ ವಿರಕ್ತ ಜಂಗಮರು ಈ ಸ್ತ್ರೀಯರ ಮುಖವನ್ನು ಖಂಡಿತವಾಗಿ ನೋಡಕೂಡದೆಂ ದು ಹೇಳತಕ್ಕಂಥ ಈ ಮಾತು ನ್ಯಾಯವಾದುದಲ್ಲಾ

ಲಿಂಗಧಾರಿಗಳಾದ ಶಿವಭಕ್ತರು ವೀರಶೈವ ಶಿವ್ಹಾನ್ನವನ್ನನುಸರಿಸಿ ಹಾ ಲು ಮೊಸರು ತುಪ್ಪ ಮೊದಲಾದ ಪದಾರ್ಥಗಳನ್ನು ಮೊದಲು ಜಂಗಮ ಲಿಂಗಕ್ಕೆ ಸಮರ್ಪಿಸಿ ಬಳಿಕ ತಾವು ಅವರ ಪರಿಮುಖದಿಂದ ಪ್ರಸಾದಾನ್ನ ವಂಯೀಸಿಕೊಂಡು ಶಾಸ್ತ್ರಾನುಸಾರವಾಗಿ ಸ್ವೀಕರಿಸಬೇಕಾಗಿರುವದರಿಂದ ವಿರಕ್ತ ಜಂಗಮರು ಭಕ್ತಾದಿಗಳ ಗೃಹಕ್ಕೆ ಹೋಗಿ ಅವರು ಮಾಡತಕ್ಕ ಸೇವಾಸತ್ಕಾರ ಗಳನ್ನು ಅಂಗೀಕರಿಸಲೇಬೇಕಾಗಿದೆ.

ಭಕ್ತಾದಿಗಳು ತಾವಾಗಿ ತಾವು ಬಂದು ದಂಡವತ್ ಪ್ರಣಾಮವಂಗೈಯುತ್ತ ಪ್ರಾರ್ಥನಾ ಮಾಡಿಕೊಂಡರೆ ಅಂತಹ ಸದ್ಭಕ್ತರ ಮನೆಗಳಿಗೆ ವಿರಕ್ತರು ಹೋಗಿ ಪ್ರೀತಿಇಂದ ಭೋಜನವಂ ಮಾಡಬಾರದೆಂದು ಯಾವ ಶಾಸ್ತ್ರದಲ್ಲಿಯೂ ನಿಜ ವಾಗಿ ಹೇಳಿಲ್ಲ ಅತ್ಯುತ್ಸಾಹದಿಂದ ಕರೆದೊಯ್ದು ಭಕ್ತರ ಮನೆಗಳಲ್ಲಿ ವಿರಕ್ತ ಜಂಗಮರು ಸಂಭ್ರಮದಿಂದ ತಮ್ಮ ಸ್ನಾನ ಶಿವಾರ್ಚನೆಯಂ ಮಾಡಿಕೊಂಡು ಏ ಕಾನ್ನವಂ ಗ್ರಹಿಸಿಕೊಂಡಿದ್ದರೂ ಇರಬಹುದು ಇದರಿಂದೇನೇನು ವಿರಕ್ತರಿಗೆ ಹಾನಿಇಲ್ಲ ಸ್ಪಷ್ಟವಾದ ಇದೇ ಅಭಿಪ್ರಾಯವನ್ನು ಸೂಕ್ಷ್ಮಾಗಮದ ೬ನೇ ಪಟಲದಲ್ಲಿ —— ಏಕಾನ್ನಂವಾಪಿಭುಂಜೀತ ಪ್ರಾರ್ಥಿತ ಸದ್ವಿಜಾದರಾತ್...... ಯೆಂಬ ಈ ಸೂತ್ರದಿಂದ ಹೇಳಲ್ಪಟ್ಟಿರುವದು ಹೀಗಿರುವದರಿಂದ ವಿರಕ್ತ ಜಂ ಗಮರು ಭಕ್ತಾದಿಗಳಮನೆಗಳಲ್ಲಿ ಏಕಾನ್ನವಂ ಗ್ರಹಿಸ ಕೂಡದೆಂದು ಹೇಳುತ ಕ್ಕಂಥ ಮಾತು ನೀರಮೇಲಿನ ಗುರಳಿಯಂತೆ ವ್ಯರ್ಥವಾದದು.

ಈ ವಿರಕ್ತ ಜಂಗಮರಿಗೆ ಧನಧಾನ್ಯಗಳನ್ನು ವಸ್ತ್ರಾಭರಣಗಳನ್ನು ಪಶು
ವಾಹನಾದಿಗಳನ್ನು ಭಾರ್ಯೆಯನ್ನು ಇವು ಮೊದಲಾದವುಗಳನ್ನು ಕೊಡಕೂಡ
ದೆಂದು ಹೇಳುವ ಮಾತಾದರೂ ಸದಾಜ್ಞಾನಿಗಳಿಂದ ಕೇಳಲ್ಪಡಲು ಯೋಗ್ಯ
ವಾದದ್ದಲ್ಲ ಅದೇನು ಕಾರಣವೆಂದರೆ ಈ ವಿರಕ್ತ ಜಂಗಮರು ಧನಧಾನ್ಯ ಮೊದ
ಲಾದ ಹೊರಗಿನ ವಸ್ತುವಾಹನಾದಿ ಮುಖ್ಯ ಮಹಾದಾನಂಗಳಿಗೆ ಅನರ್ಹರಾಗಿ
ದ್ದರೆ ಈ ವೇದ ಸಂಮ್ಮತವಾದ ಸೂಕ್ಷ್ಮಾಗಮದ ಏಳನೇ ಪಟಲದಲ್ಲಿ —— ಆ
ತ್ಮಾನಂ ವಾಸುತಾನ್ವಾಪಿ ಭಾರ್ಯಾಮಪಿಧ ನಾದಿವಾ ॥ ಭೂಷಣಂ ಸರ್ವವಸ್ತ್ರಾನಿ
ವಾಹನಾ ನಿಪಶೂನಪಿ॥ ಯತ್ಸ್ವಕೀಯ ಮಭಿಪ್ರೇತಂತತ್ಕುರ್ಯಾಜ್ಜಂಗಮಾರ್ಪಿ
ತಂ॥ ಅನುಭೂತಂತುತೈಃ ಪಶ್ಚಾದಾದಾಯ ಸ್ವಯಮಾತ್ಮಸಾತ್॥ ಕುರ್ಯಾತ್ಪ್ರ
ಸಾದ ಬುಧ್ಯಾಯಂ ಸವಿಶಿಷ್ಟ ಇತಿಸ್ಮೃತಃ......ಯಂದೀ ಅಭಿಪ್ರಾಯವನ್ನೆಂದಿ
ಗೂ ಹೇಳುತ್ತಿರಲಿಲ್ಲಾ ಈ ವಿರಕ್ತ ಜಂಗಮರು ತನುಮನಧನವನಿತಾದಿ ಸಕ
ಲ ಮಹಾ ದಾನಂಗಳಿಗೂ ಕೂಡಾ ಅರ್ಹರಾಗಿರುವದರಿಂದಲೇನೆ ಈ ಸೂಕ್ಷ್ಮಾ
ಗಮವು ಭಕ್ತಜನಂಗಳು ತಮ್ಮ ತನುಮನಧನ ಮೊದಲಾದವುಗಳನ್ನು ಮೊದಲು
ಜಂಗಮಲಿಂಗಕ್ಕರ್ಪಿಸಿ ಅವುಗಳನ್ನು ಪ್ರಸಾದ ಬುದ್ಧಿಯಿಂದ ತೆಗೆದುಕೊಳ್ಳಬೇ
ಕೆಂದು ಸಾರಲ್ಪಡುತ್ತಿದೆ ಅದು ಕಾರಣ ವಿರಕ್ತ ಜಂಗಮರಿಗೆ ಭಕ್ತಾದಿಗಳು
ತಮ್ಮ ಧನವನಿತೆಮೊದಲಾದದ್ದನ್ನು ಕೊಡಕೂಡದೆಂದು ಹೇಳುವ ಮಾತು ಯೋ
ಗ್ಯವಾದದ್ದಲ್ಲ

ಶಿವಸಿದ್ಧಾಂತ ಮಹತ್ವಕ್ಕೆ ಆಶ್ರಯವಾದ ಈಶೈವರತ್ನಾಕರದಲ್ಲಿ——ಅಯಂ
ಜಂಗಮ ಲಿಂಗೈಕ್ಯೋ ವೀರೋಯಜ್ಜಂಗಮಾರ್ಪಿತಂ ॥ ಅರ್ಥಪ್ರಾಣಾದಿಕಂ ಪ್ರೀ
ತ್ಯಾದದ್ಯಾನ್ಮನಸಿ ನಸ್ಮರೇತ್......ಯಂದು ಹೇಳಲ್ಪಟ್ಟಿರುವದರಿಂದ ಭಕ್ತಾದಿಗ
ಳು ಈ ವಿರಕ್ತ ಜಂಗಮರಿಗೆ ಆ ತಮ್ಮ ಅರ್ಥ ಪ್ರಾಣಾಭಿಮಾನಗಳನ್ನು ಶ
ಯನಾಸನಗಳನ್ನು ಪಶ್ವಾದಿ ಯಾಗಿ ನಾನಾವಿಧ ಆಭರಣಗಳನ್ನು ಸಹ ಕೊಡು
ವದಕ್ಕೆ ಮನಸ್ಸಿನಲ್ಲಿ ಯಳ್ಳಷ್ಟಾದರೂ ಸಂಶಯವನ್ನು ಮಾಡಿಕೊಳ್ಳಬಾರದು

ಈ ವಿರಕ್ತ ಜಂಗಮರಿಗೆ ಅರ್ಥ ಪ್ರಾಣಾಭಿ ಮಾನಗಳನ್ನು ಕೊಡದೆ ಇರು
ವವಂಚಕರಾದ ಭಕ್ತರಿಗೆ ಆ ಪರಶಿವ ಮೂರ್ತಿಯಲ್ಲಿ ಐಕ್ಯವು ಸಮನಿಸುವದೇ
ಇಲ್ಲವು ಯಾವ ಶಿವಭಕ್ತನು ನಿರಂಜನರಾದ ಈ ವಿರಕ್ತ ಜಂಗಮರಿಗೆ ಅಭ್ಯಂಜ
ನಸ್ನಾನವಂಮಾಡಿಸಿ ಅಲಂಕಾರವಾದ ವಸ್ತ್ರಗಳಿಂದಲೂ ಧನಧಾನ್ಯಗಳಿಂದಲೂ
ವನಿತಾದಿ ವಿಷಯಗಳಿಂದಲೂ ವಾಹನಗಳಿಂದಲೂ ಪೂಜಿಸುತ್ತಾನೋ ಅವನು
ಸದಮಳಾನಂದಪದ ಮುಕ್ತಿಯನ್ನು ಪಡೆದುಕೊಳ್ಳುತ್ತಾನೆ ಈ ಮಾತಿನಲ್ಲಿ ಸಂಶ
ಯವಿಲ್ಲಾ ಇದೇ ಅಭಿಪ್ರಾಯವನ್ನೇಲೈಂಗೆದಲ್ಲಿ ——ಅ ಸನಾಭ್ಯಂಜನ ವಸ್ತ್ರ
ಧಾನ್ಯಂಗನಾದಿಭಿಃ । ಪೂಜಯೇಚ್ಛಿವ ಭಕ್ತೋಯಃ ಸಯಾತಿ ಪರಮಾಂಗತಿಃ ॥
......ಯಂದು ಹೇಳಲ್ಪಟ್ಟಿರುವದು ಅದು ಕಾರಣಸಕಲಶಿವಭಕ್ತರು ಪ್ರೀತಿಯಿಂದ

ಹಾಲು, ಹಣ್ಣು ಸಕ್ಕರೆ ತುಪ್ಪಕ್ಷೀರು ಪೂರಿ ಮೊದಲಾದ ಭುಂಜಿಸುವ ವಸ್ತುಗಳ ನ್ನೂ, ನೂತನವಾದ ವಸ್ತ್ರಗಳನ್ನೂ ಗಂಧಾಭರಣಗಳನ್ನೂ ವನಿತೆಯನ್ನು ವಾಹನವನ್ನೂ, ಇವು ಮೊದಲಾಗಿ ಮೊದಲು ಜಂಗಮಾರ್ಪಿತವನ್ನು ಮಾಡಿ ನಂತರ ಅವುಗಳನ್ನು ಪಯೋಗಿಸಕೊಳ್ಳಬೇಕಲ್ಲದೆ ಜಂಗಮಾರ್ಪಿತವಲ್ಲದವಸ್ತುಗಳನ್ನೆಂದಿಗೂ ಉಪಯೋಗಿಸಕೊಳ್ಳಲಾಗದು

ವಿರಕ್ತ ಜಂಗಮರು ಸರ್ವಸಂಗ ಪರಿತ್ಯಾಗ ಮಾಡಿದವರಾಗಿದ್ದರೂ ಭಕ್ತರ ನಿಯಮಕ್ಕೋಸ್ಕರ ಅವರು ಕೊಡುವ ತನುಮನಧನ ವನಿತಾದಿ ವಿಷಯಗಳನ್ನು ಸ್ವೀಕರಿಸಲಿಕ್ಕೇಬೇಕು ಯಾಕಂದರೆ ಹಾಗೆ ಸ್ವೀಕರಿಸದಿದ್ದರೆ ವೀರಶೈವ ಲಿಂಗೀ ಸನ್ಯಾಸಿಗಳಿಗೂ ಅಲಿಂಗೀಸನ್ಯಾಸಿಗಳಿಗೂ ಏನೂ ಭೇದವಿಲ್ಲವೆಂದು ಹೇಳಬೇಕಾಗುವದು ಮತ್ತು--

ಮಜ್ಜನಂ ವಸ್ತ್ರಗಂಧೌಚ ಅಕ್ಷತಾನ್‌ಪುಷ್ಪ ಮೇವಚ ।
ಧೂಪಂ ದೀಪಂಚ ನೈವೇದ್ಯಂ ಹಸ್ತಾಚ ಮನಮೇವಚಾ ॥
ತಾಂಬೂಲ ವಸನಂ ಚೈವತುರ್ಯತ್ರಿತಯಮೇವಚ ॥
ಮಾನಿನೀಂ ಭೂಷಣಂಚೈವ ವಾಹನಂಗ್ರಹ ಮೇವಚ ॥
ಏವಂ ಷೋಡಶಸದ್ಭಕ್ತ್ಯಾ ಚರಲಿಂಗೆ ಸಮರ್ಪಯೇತ್ ॥

ಯಂದು ಹೇಳುವ ಇತ್ಯಾದಿ ಪ್ರಮಾಣ ವಚನಗಳಿಗೆಲ್ಲಾ ಗತಿಯೇ ಇಲ್ಲದಂತಾಗುವದು ಅದು ಕಾರಣ ಭಕ್ತಾದಿಗಳು ಭಕ್ತಿಇಂದೊಡಿಗೂಡಿ ಕೊಡುವ ಪದಾರ್ಥಗಳನ್ನು ವಿರಕ್ತರಾದ ಜಂಗಮರು ಸ್ವೀಕರಿಸಲಿಕ್ಕೇಬೇಕು

ಹೀಗೆ ಭಕ್ತಾದಿಗಳು ಭಕ್ತಿಯಿಂದೊಡಗೂಡಿ ಕೊಡಲ್ಪಟ್ಟವನಿತಾದಿ ವಿಷಯಗಳನ್ನು ಜ್ಞಾನ ವೈರಾಗ್ಯ ಸಂಪನ್ನರಾದ ನಿರಾಭಾರಿ ವೀರಶೈವರು ಸ್ವೀಕರಿಸುವರೀತಿ ಹೇಗಂದರೆ

ನಾವು ಈಲೌಕಿಕ ವಿಷಯ ವ್ಯಾಮೋಹರಹಿತರಾಗಿದ್ದರೂ ಭಕ್ತಾದಿಗಳು ಅಪರ ಶಿವನಪ್ಪಣೆ ಮೇರೆಗೆ ತಮ್ಮ ತನುಮನಧನ ವನಿತಾದಿ ವಿಷಯಗಳನ್ನು ನಮಗೆ ಅರ್ಪಿಸತಕ್ಕವರಾಗಿರುವರೆಂದೂ ಮತ್ತು ಭಕ್ತಾದಿಗಳು ತಮ್ಮ ಸರ್ವಸ್ವವನ್ನು ನಮಗೆ ಭಕ್ತಿ ಪೂರ್ವಕವಾಗಿ ಅರ್ಪಿಸಿ ದೃಢವಾಗಿ ಸೇವಿಸಿದರೇನೆ ಆ ಪರಶಿವನು ಈ ಭಕ್ತರನ್ನು ಕೈ ಹಿಡಿದು ಅನುಗ್ರಹಿಸುವನೆಂದೂ ತಿಳಿದು ಈ ಪ್ರಕಾರವಾದ ನಿರಾಶ ವಿಚಾರಗಳಿಂದ ಭಕ್ತಾದಿಗಳು ಕೊಡಲ್ಪಟ್ಟ ಧನ ವನಿತಾದಿ ವಿಷಯಗಳನ್ನು ಸ್ವೀಕರಿಸಬೇಕು ಅಷ್ಟೇ ಹೊರತು ತಮ್ಮ ಸಹಜ ಧರ್ಮಕ್ಕೆ ವಿರುದ್ಧವಾದ ಆಚರಣೆಯಲ್ಲಿ ಪ್ರವರ್ತಿಸಲಾಗದು.

ನಿರಾಭಾರಿ ವೀರಶೈವರಲ್ಲಿ ಹೊನ್ನು ಹೆಂಣು ಮಂಣು ಮೊದಲಾದವಿಷಯಗಳನ್ನು ದೂರೀಕರಿಸಿ ಬಿಡುವ ದೃಢವೈರಾಗ್ಯ ಬುದ್ಧಿ ಇಲ್ಲದಿದ್ದರೆ ಅವರಲ್ಲಿ ಲೋಕ ಪೂಜ್ಯತ್ವವು ಅದು ಹೇಗೆ ತಾನೆ ಉಳಿಯುವದು ವನಿತಾದಿ ವಿಷಯಗಳ

ಲ್ಲಿ ಕ್ರಮವಾಗಿ ವೈರಾಗ್ಯ ಬುದ್ಧಿ ಇದ್ದರೇನೆ ವಿರಕ್ತರಲ್ಲಿ ಲೋಕ ಪೂಜ್ಯತ್ವ ಉಳಿಯುವದು

ನಿರಾಭಾರಿ ವೀರಶೈವರಲ್ಲಿ ಈ ನಿಜವೈರಾಗ್ಯ ಇರಬೇಕೆಂಬುದಕ್ಕಾಗಿಯೇ

ಸುಪ್ರಭೇದಾಗಮದಲ್ಲಿ

ಕಾಯೇನವಾಚಾ ಮನಸಾತ್ಯಕ್ತ್ವಾಭೂವಿತ್ತ ಕನ್ಯಕಾಃ ।
ತ್ಯಕ್ತ್ವಾ ಗೃಹಮಠಾದೀನಿ ಮನುಷ್ಯಾಣಾಂ ಗೃಹಾಣಿಚ ॥
ಪ್ರವಾಸಂ ತೇನಕರ್ತವ್ಯಂ ವನೇಗಿರಿ ಗುಹಾದಿಷು ।
ತೃಣೀಕೃತ ಜಗಜ್ಜೀವೋ ಲೌಕಿಕಾ*ಚಾರ ವರ್ಜಿತಃ ॥
ತ್ಯಕ್ತ್ವಾ ಪ್ರವರ ಗೋತ್ರಾಣಿ ಸೂತ್ರವರ್ಣಾದಿಕಂಸ್ತಥಾ ॥
ಸ್ವಯಂಭುಲೀಲ ಯಾಸೋಹಂ ಬ್ರಹ್ಮೇತಿ ವಿದಿತಾತ್ಮವಾನ್ ।

ಪಾರಮೇಶ್ವರಾಗಮದಲ್ಲಿ

ಮೌನಮೇಕಾಂತವಾಸಶ್ಚ ಮಚ್ಛಾಸ್ತ್ರಸ್ಯಾವಲೋಕನಂ ।
ವಿರಕ್ತಿರ್ವಿಷಯ ಗ್ರಾಮೇ ವೀರಶೈವಸ್ಯಲಕ್ಷಣಂ ॥
ಶಾಂತಿರ್ನಿಷ್ಠಾ ಭೂತದಯಾಚಿತ್ತವೃತ್ತಿನಿರೋಧನಂ ।
ಸರ್ವತ್ರೇಶ್ವರ ತಾದಾತ್ಮ್ಯಂ ವೀರಶೈವ ಸ್ಯಲಕ್ಷಣಂ ॥
ನೈವರಕ್ಷನ್ತಿ ವಿಷಯಾನ ಭೋಗಾನ ಚಬಾಂಧವಾಃ ।
ನೈವಸಂ ಪತ್ತಿದಾರಿದ್ರ್ಯೇ ನಿಷ್ಕೈಕಾ ಸತಿಶಂಕರೇ ॥

ಇತ್ಯಾದಿ ಶಿವಾಗಮ ಶಾಸ್ತ್ರವಿಧಿ ವಚನಗಳು ನಿರಾಭಾರಿ ವೀರಶೈವರ ಲಕ್ಷಣಗಳನ್ನು ಹೀಗೆ ಹೇಳುತ್ತಲಿವೆ ಅದು ಕಾರಣ ಮಹಾ ವೈರಾಗ್ಯ ಶಾಲಿಗಳಾದ ನಿರಾಭಾರಿ ವೀರಶೈವರು ಭಕ್ತಾದಿಗಳು ಶಾಸ್ತ್ರಪದ್ಧತಿಪ್ರಕಾರ ತಮ್ಮ ತನುಮನಧನವ ನಿತ್ಯಾದಿ ವಿಷಯಗಳನ್ನು ಭಕ್ತಿಪೂರ್ವಕವಾಗಿ ಅರ್ಪಿಸಲ್ಪಟ್ಟಾಗ್ಯೂ ಅವುಗಳನ್ನು ದೂರದಲ್ಲಿಯೇ ಬಿಟ್ಟುಕೊಟ್ಟು ಕೇವಲ ನಿಸ್ಪೃಹ ಮೂರ್ತಿಗಳಾಗಿರಬೇಕು ಇದೇ ನಿರಾಭಾರಿ ವೀರಶೈವರಿಗೆ ಮುಖ್ಯಲಕ್ಷಣವು

ಇಂತಪ್ಪ ಲಕ್ಷಣಮುಳ್ಳ ಮಹಾತ್ಮರಾದ ಅತ್ಯಂತ ನಿಸ್ಪೃಹರಾದ ವಿರಕ್ತ ಜಂಗಮರಿಗೆ ಭಕ್ತಾದಿಗಳು ತೈಲಾಭ್ಯಂಗನಸ್ನಾನವಂಮಾಡಿಸಿ

ನೂತನವಾದ ವಸ್ತ್ರಗಳಂ ಧರಿಸಿ ಅವರಿಗಿಷ್ಟವಾದ ಮೃಷ್ಟಾನ್ನವಂ ಮಾಡಿ ಉಣಬಡಿಸಿ ಯೋಗ್ಯಾಸನವಂ ಕೊಟ್ಟು ಪಾದಸೇವೆಯಂ ಗಯ್ಯುತ್ತಾ ಪ್ರೀತಿಯಿಂದ ಆಶ್ರಯಿಸಿ ಮಾತನಾಡುತ್ತಿರಬೇಕು ದೀಕ್ಷಾ ಅಭಿಷೇಕ ವಿವಾಹಾದಿ ಕರ್ಮಗಳನ್ನಾಗಲಿ ಶ್ರೀ ಶೈಲಾದಿ ಶಿವಕ್ಷೇತ್ರಗಳನ್ನಾಗಲಿ ಭೋಜನವನ್ನಾಗಲಿ ಶಿವಭಕ್ತನಾದವನು ಈವಿರಕ್ತ ಜಂಗಮರನ್ನು ಬಿಟ್ಟು ಸರ್ವಥಾ ಮಾಡಕೂಡದು

---

+ ಜ್ಞಾನಾಮೃತೇನ ತೃಪ್ತೋಪಿಯೋಗೀ ಧರ್ಮಂ ನಸಂತ್ಯಜೇತ್। ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂ ತೇಽಲೌಕಿಕಾಃ

ಒಂದುವೇಳೆ ಯಾವನಾದರೂ ಈ ವಿರಕ್ತ ಜಂಗಮರನ್ನು ಬಿಟ್ಟು ತತ್ಕರ್ಮವನ್ನಾ ಚರಿಸಿದ್ದಾದರೆ ಅವನು ಈ ಘೋರವಾದ ನರಕವನ್ನನುಭವಿಸಿ ಮುಂದೆ ಚಂಡಾಲ ಯೋನಿಯಲ್ಲಿ ಹುಟ್ಟಿಬರುತ್ತಾನೆಂದು ಈ ಶೈವರತ್ನಾಕರದ ವಚನವು ಹೀಗೆ ಹೇಳುತ್ತಿದೆ —— ಜಂಗಮೇ ಸವಿನಾ ದೇವಿಕರ್ಮಾಣಿ ಚರಿತೆಯದಿ ಸ ಏವ ನರಕೇಘೋರೆ ಪುನಶ್ಚಂಡಾಲ ವಂಶಜಃ

ಭಕ್ತಾದಿಗಳು ಈ ವಿರಕ್ತ ಜಂಗಮರನ್ನು ಬಿಟ್ಟು ಯಾವದಾದರೊಂದು ಕೆಲಸವನ್ನು ಮಾಡಿದ್ದಾದರೆ ಹಿಂದೆ ಸಂಪಾದಿಸಿದ್ದ ಯಲ್ಲಾ ಪುಣ್ಯವೂ ಪ್ರಸಾದವೂ ಸಹ ನಿಷ್ಫಲವಾಗಿ ಹೋಗಿ ಕಡೆಗೆ ರೌರವ ನರಕವಾಗುವದೆಂದು ಹೇಳುವದಕ್ಕೆ ಇಷ್ಟೇ ಆಧಾರವಲ್ಲದೆ ಇನ್ನೂ ಅನೇಕಾಧಾರಗಳಿರುವವು ಅವು ಯಾವವು ಅಂದರೆ --

### ಸೂಕ್ಷ್ಮಾಗಮದಲ್ಲಿ

ಶಯನೇಷ್ವಾಸನೆ ಯಾನೇ ದೇವ ನಾದಿಷು ಸರ್ವದಾ।
ಚರಾರ್ಪಿತಂ ವಿನಾದೇವಿ ಯೋನುಭುಂಗ್ತೆ ಸನಾರಕೀ॥
ಭಕ್ಷ ಭೋಜ್ಯಾದಿ ವಸ್ತೂನಿಯೋ ಭುಂಕ್ತೆ ಚರವರ್ಜಿತಃ।
ಸಭುಂಕ್ತೆ ಮಲಮಾಂಸಾದಿಶ್ಚ ಪಾಕಾಗಾರ ಸಂಭವಂ।
ವಸ್ತ್ರಭೂಷಣ ಗಂಧಾದಿ ಧೂಪತಾಂಬೂಲಾದಿಕಂ।
ಜಂಗಮೇಸವಿನಾ ಭುಂಕ್ತೆ ಪ್ರಸಾದೋ ನಿಷ್ಫಲಂ ಭವೇತ್॥

### ಕಾಳಿಕಾ ಖಂಡದಲ್ಲಿ

ವಿವಾಹೇಷು ಪ್ರತಿಷ್ಠಾಸುಗಣ ಸಂಕುಲ ಪರ್ವಣಿ।
ಜಂಗಮೇನ ವಿನಾಭುಂಕ್ತೆ ಪ್ರಸಾದೋನಿಷ್ಫಲಂಭ ಭವೇತ್॥

### ಶಿವರಹಸ್ಯದಲ್ಲಿ

ಪ್ರಸಾದಮಿಷ್ಟ ಸಂಯುಕ್ತಂ ಯೋಭುಂಕ್ತೆ ಜಂಗಮಂವಿನಾ।
ಗುರುದ್ರೋಹಿ ಶಿವದ್ರೋಹಿ ಭಕ್ತದ್ರೋಹಿ ನಸಂಶಯಃ॥

ಹೀಗಿರುವದರಿಂದ ಭಕ್ತಾದಿಗಳು ಈ ವಿರಕ್ತ ಜಂಗಮರನ್ನು ಬಿಟ್ಟು ವಿರುದ್ಧವಾಗಿ ಯಾವ ಕೆಲಸ ಕಾರ್ಯಗಳನ್ನು ಮಾಡಕೂಡದು. ಶಾಸ್ತ್ರ ವಿಚಾರ ಮಾಡಿ ನೋಡಿದರೆ ಅತಿಥಿಗಳಾದ ಈ ವಿರಕ್ತ ಜಂಗಮರಿಗಿಂತಲೂ ಶ್ರೇಷ್ಠವಾದಪಾತ್ರತ್ವವು ಮತ್ತಾವದೂ ಇಲ್ಲವು ಇವರೇ ಸಕಲ ವಿಧವಾದ ದಾನಕ್ಕೂ ಪೂಜ್ಯಕ್ಕೂ ಅತ್ಯಂತ ಅರ್ಹರಾಗಿರುವರು.

ಈ ವಿರಕ್ತ ಜಂಗಮರ ಪಾದದಲ್ಲಿ ಯಾವ ಸ್ತ್ರೀ ಪುರುಷರು ಭಕ್ತಿ ಇಲ್ಲದವರಾಗಿ ಮೂಢ ಬುದ್ಧಿಯಿಂ ಅಹಂಕಾರ ಗೊಂಡಿರುವರೋ ಅವರು ತಮ್ಮ

ಲೀಗೆದಲ್ಲಿ ಮತ್ತು ತಮ್ಮ ಗುರುಗಳಲ್ಲಿ ಎಷ್ಟು ಭಕ್ತಿಯುಳ್ಳವರಾದರೂ ಅದೆಲ್ಲಾ ವೂ ಸ್ಥಿರವಾಗಿನಿಲ್ಲದೆ ವ್ಯರ್ಥವಾಗಿ ಕೆಟ್ಟು ಹೋಗಿ ಬಿಡುವದು ಈ ಅರ್ಥ ವನ್ನು॥ ಶೈವರತ್ನಾಕರದಲ್ಲಿ ಗುರು ಭಕ್ತಿ ವಿಹೀನಸ್ಯ ಲಿಂಗಭಕ್ತಿರ್ಹಿ ನಿಷ್ಫಲಾ ಚರಸ್ಯಭಕ್ತಿ ವಿಹೀನಸ್ಯದ್ವಿತೀಯಾ ಯಾಚ ನಿಷ್ಫಲಾ॥ ಯೆಂಬ ಸೂತ್ರದಿಂದ ಹೇಳ ಲ್ಪಟ್ಟಿರುವದು.

ಈ ಕಾರಣದಿಂದ ಭಕ್ತಾದಿಗಳು ಮಹಾ ಯಶಸ್ವಿಗಳಾದ ನಿರಾಭಾರಿ ವೀ ರಶೈವರನ್ನು ತಮ್ಮ ಮನೆಗೆ ಅತ್ಯಂತ ವಿಜೃಂಭಣೆಯಿಂದ ಬರಮಾಡಿಕೊಂಡು ತೈಲಾಭ್ಯಂಗನ ಸ್ನಾನವಂ ಮಾಡಿಸಿ ಅವರಿಗೆ ಭಕ್ಷ ಭೋಜ್ಯ ರಸಾನ್ನಾದಿಗಳ ನ್ನರ್ಪಿಸಿ ಪರಿಮಳ ಯುಕ್ತವಾದ ಗಂಧ ತಾಂಬೂಲಾದಿಗಳನ್ನೂ ವಸ್ತ್ರಗಳನ್ನು ವೃಷಭಾದಿ ವಾಹನಗಳನ್ನು ಧನ ಧಾನ್ಯ ಮೊದಲಾದ ವಿಶಿಷ್ಟ ಪದಾರ್ಥಗ ಳನ್ನು ಸರ್ವಸ್ವವನ್ನು ಅವರ ಪಾದಕ್ಕರ್ಪಿಸಿ ಅವರ ಪರಿ ಮುಖದಿಂದಲೇ ತಮ್ಮ ಕಾರ್ಯವನ್ನಾಗ ಮಾಡಿಕೊಳ್ಳಬೇಕೆಂಬ ಭಿಪ್ರಾಯವು ಶತ ಸಿದ್ಧ ವಾಗಿರುವ ದು ಅದು ಕಾರಣ ನಿಜಾನಂದಾನುಭವಿಗಳಾದ ಈ ವಿರಕ್ತ ಜಂಗಮರಲ್ಲಿ ಸ ರ್ವಾಧಿಕಾರತ್ವ ಸುಸ್ಥಿತವಾಗಿದೆ ಇದು ಸತ್ಯ .

ಇಂತು ಪ್ರತಿಪಾದಿಸಿದ ಶಾಸ್ತ್ರ ಪ್ರಮಾಣ ವಚನಗಳನ್ನು ನೀತಿ ಭ್ರಷ್ಟ ರಾದ ಆ ಈ ಮೂರ್ಖ ಜನಂಗಗಳು ಕಂಣು ಬಿಟ್ಟುಕೊಂಡು ನೋಡದೆ ಅಣ ವಾದಿ ಮಲತ್ರಯ ನಾಶಕ್ಕೆ ಕರ್ತೃಗಳಾದ ಈ ವಿರಕ್ತ ಜಂಗಮರನ್ನು ಮನ ಬಂದ ನ್ತೆ ದೂಷಿಸಿ ಮಹಾ ಅಪರಾಧವಂ ಮಾಡಿಕುತ್ತಾರೆ ಇಂಥ ಧೂರ್ತರಾ ದ ನೀಚಾತ್ಮರಿಗೆ ಮುಂದೆ ಗೂಗೆ ಕಾಗೆ ಹಂದಿ ಹದ್ದು ಹಾವು ಕತ್ತೆಗಳಾಗಿ ಹುಟ್ಟಿ ಬಳಲುವ ರೀತಿಯಿಂದಿಗಾದರೂ ತಪ್ಪುವದೆ ತಿಳಿದೂ ತಿಳಿದೂ ತಿಳಿಯದ ಮೂರ್ಖ ಜನರ ಹಾಂಗೆ ನಿಜ ಪರ ಬ್ರಹ್ಮ ಜ್ಞಾನ ಚೈತನ್ಯಕ್ಕಧಿಪತಿಗಳಾದ ಈ ವಿರಕ್ತ ಜಂಗಮರನ್ನು ದೂಷಿಸುವದು ತಲೆಯಲ್ಲಾ ಹರಟುವನು ಬೈಯು ವದು ನ್ಯಾಯವಾದುದೆ ಗುರುಗಳಿಗಿಂತಲೂ ವಿರಕ್ತ ಜಂಗಮರು ಕಡಿಮೆ ಎಂ ದಾಗಲಿ ಅಥವಾ ಗುರು ಜಂಗಮರಿಬ್ಬರು ಸಮವೆಂದಾಗಲಿ ಹೇಳಿದರೆ ಧರ್ಮಾ ಧರ್ಮ ವ್ಯವಸ್ಥಾ ಮಾಡತಕ್ಕ ಸಮಸ್ತ ಶಾಸ್ತ್ರಗಳಿಗೂ ವಿಪ್ಲವ ಬಂದು ಹೋ ಗುವದಿಲ್ಲವೆ ಈ ನಿಜ ಜಂಗಮನ ಪಾದದಲ್ಲಿ ಭಕ್ತಿ ಇಲ್ಲದವನಿಗೆ ಮುಂದೆ ಮು ಕ್ತಿ ಇಲ್ಲವೆಂದು ವೇದ ಶಾಸ್ತ್ರ ಪುರಾಣಾದಿ ವಚನಗಳು ಪುರಾತನ ಗೀತಾದಿ ಗಳೂ ಇತಿಹಾಸಗಳೂ ಕೂಗಿ ಹೇಳುವದನ್ನು ಕಿವಿಯಿಂದ ಕೇಳಿಲ್ಲವೆ ವಿರಕ್ತ ಜಂಗಮರನ್ನು ದೂಷಣೆ ಮಾಡುವವರಿಗೆ ಅಗೌರವವೂ ಅಪಖ್ಯಾತಿಯೂ ಬಂ ದು ಹೋಗುವದೆಂದು ಜಗತ್ತಿನಲ್ಲಿ ಈ ನಮ್ಮ ಶಾಸ್ತ್ರಕಾರರು ಹೇಳುವ ಮಾ ತು ಸುಳ್ಳೆ ಮನವರಿಯದೆ ಇರುವ ಕಳ್ಳತನವುಂಟೆ ಶಿವ ಭಕ್ತಿ ಯುಕ್ತನಾದ

ಪುರುಷನು ತಾನು ಸ್ವೀಕರಿಸಬೇಕಾಗಿರುವ ಪದಾರ್ಥಗಳನ್ನೆಲ್ಲಾ ಮೊದಲು ಷ ಟಸ್ಥಳ ಜ್ಞಾನ ಸಹಿತರಾದ ವಿರಕ್ತ ಜಂಗಮರಿಗೆ ಸಮರ್ಪಿಸಿ ನಂತರ ತಾವು ಸ್ವೀಕರಿಸಬೇಕೆಂಬರ್ಥವು ಸರ್ವ ಸಮ್ಮತವಾಗಿದ್ದರೂ ಸೊಕ್ಕಿನಿಂದ ಇಂತಿಂಥಾ ಕೆಟ್ಟ ಮಾತುಗಳನ್ನು ವಿರಕ್ತ ಜಂಗಮರಿಗಾಡುತ್ತಲಿದ್ದೀರಿ ಉರಿಯುವ ಕೊ ಳ್ಳಿಯನ್ನು ತೆಗೆದು ತಿಗದಲ್ಲಿಟ್ಟು ಕೊಳ್ಳುವದೂ ಸನ್ಯಾಸಿಗಳಾದ ಈ ವಿರಕ್ತ ಜಂಗಮರನ್ನು ಕೆಣಿಕಿ ರೇಗಿಸುವದೂ ಒಂದೇಯೆಂಬು ಹೇಳತಕ್ಕಂಥಾ ಜನರ ಮಾತನ್ನು ಇನ್ನೂ ನೀವು ಕೇಳಿ ತಿಳಿದಿಲ್ಲವಾಗಿರಬಹುದು. ಒಳ್ಳೇದು ಇನ್ನೂ ಮೇಲಾದರೂ ವಿರಕ್ತ ಜಂಗಮರ ನಿಂದನೆಯನ್ನು ಬಿಟ್ಟು ಯುಕ್ತವಾದ ಮಾ ರ್ಗವನ್ನವಲಂಬಿಸಿ ವರ್ತಿಸತಕ್ಕವರಾಗಬೇಕು ಒಂದು ವೇಳೆ ವಿರಕ್ತ ಜಂಗಮ ರ ನಿಂದನೆಯನ್ನು ಬಿಟ್ಟು ಬಡವಿದ್ದರೆ ಯುಕ್ತವಾದ ಮಾರ್ಗವನ್ನವಲಂಬಿಸಿ ವರ್ತಿಸದಿದ್ದರೆ ಮುಂದೆ ಪರ್ಯವಸಾನವೇನೆಂಬುದನ್ನು ಹೇಳಬೇಕಾಗಿಲ್ಲ.

ಹಾಗಾದರೆ ವಿರಕ್ತ ಜಂಗಮರು ತ್ರಿಲೋಕ ಪೂಜ್ಯರು ಸರ್ವಶಕ್ತಿವಂ ರೂ ಜಂಗಮೋತ್ತಮರೂ ಆಗಿದ್ದರೆ ವೀರಶೈವ ಪ್ರದೀಪಿಕೆ ಮೊದಲಾದ ಗ್ರಂ ಥ ಕರ್ತರು ಈ ವಿರಕ್ತ ಜಂಗಮರ ಮುಖಾವಲೋಕನವನ್ನು ಯೋಗ್ಯರಾದ ಸತ್ಪುರುಷರು ಮಾಡಕೂಡದು. ಮಾಡಿದ್ದಾದರೆ ನರಕವನ್ನೇ ಪಡೆಯುತ್ತಾರೆಂ ದೇಕೆ ತಮ್ಮ ಗ್ರಂಥಗಳಲ್ಲಿ ಹೇಳಿರುವರು ಹಾಗೆ ಯಂದು ಆಕ್ಷೇಪ ಉಂಟಾದರೆ ಅದಕ್ಕೆ ಉತ್ತರಾ--ಯಾವ ವಿರಕ್ತ ಜಂಗಮರು ಲೋಕಾಪವಾದಕ್ಕೂ ಪಾಪ ಕೃತ್ಯಕ್ಕೂ ಸ್ವಲ್ಪಾದರೂ ಹೆದರದೆ ಲಂಚಕ್ಕೊಡಂಬಟ್ಟು ಜಾತಿ ಕುಲಭ್ರಷ್ಟರಾ ಗಿ ಹೋದ ಸ್ತ್ರೀ ಪುರುಷರನ್ನು ಬಳಿಕೆಯಲ್ಲಿ ತೆಗೆದುಕೊಂಡು ಈ ತಪೋಹೀ ನರಾದ ಭವಿಗಳ ಕತ್ತಿನಲ್ಲಿ ಲಿಂಗವಂ ಕಟ್ಟಿ ವಿಷಯ ಸುಖಗಳಲ್ಲಿ ಇಷ್ಟ ವಿದ್ದ ವರಿಗೆ ಆಶ್ರಮವಂ ಕೊಟ್ಟು ವಕ್ರ ಮಾರ್ಗಗಾಮಿಗಳಾಗಿ ಕೆಟ್ಟ ನೀಚಾತ್ಮರಾ ಗಿ ಮತ್ತರಾಗಿ ಸ್ವಯಂ ವೈರಾಗ್ಯ ಹೀನರಾಗಿ ಪರರಿಗೆ ಮಾತ್ರ ವೈರಾಗವಂ ಬೋ ಧಿಸುತ್ತಾ ದ್ರವ್ಯದಲ್ಲಿ ಅಧಿಕವಾದ ಆಶೆಯಿಂದ ಕಂಡ ಕಂಡ ಜನರನ್ನು ಯಾಚಿ ಸುತ್ತಾ ದುರಾಚಾರಗಳಿಂದೊಡಗೂಡಿ ಕಲ್ಮಷ ಖನಿಗಳಾಗಿ ಪುರಗಳಲ್ಲಿ ಮನ ಬಂದಂತೆ ಚಕ್ಕಂದವನ್ನಾಡುತ್ತಾ ಪಾಡುತ್ತಾ ದುವೃತ್ತಿ ದುರ್ಜೀವನಗಳಿಂದೊ ಡಗೂಡಿ ಅಪಕೀರ್ತಿ ಪರರಾಗಿ ಇರುತ್ತಿಹಿರೋ

ಮತ್ತಂ ಯಾವ ವಿರಕ್ತ ಜಂಗಮರು ಸತಿಯಾದ ತನ್ನ ಪಾದೋದಕವನ್ನು ತನ್ನ ಪತಿಗೆ ಬಲಾತ್ಕಾರದಿಂದ ಕೊಟ್ಟಂತೆ ಸ್ವಕೀಯ ಪಾದ ಪ್ರಕ್ಷಾಳನೋದಕವನ್ನು ತಮ್ಮಿಷ್ಟಲಿಂಗಕ್ಕೆ ಭಿಷೇಕಿಸಿ ತಾವು ಪಾನವಂಮಾಡಿ ತಮ್ಮುಚ್ಛಿಷ್ಟವನ್ನೇ ತಮ್ಮ ಲಿಂಗಕ್ಕೆ ಕೊಟ್ಟು ನಿತ್ಯದಲ್ಲಿಯೂ ಸ್ವಕೀಯ ಪಾದಪ್ರಕ್ಷಾಳನೋದಕ ಸ್ವೀಕಾರ ನಿಯಮವುಳ್ಳವರಾಗಿ ಬಲುಗರ್ವಿಷ್ಠರಾಗಿ ತಮ್ಮ ಅಂಗದ ಮೇಲಿನ ಲಿಂಗಕ್ಕಿಂತ ಲೂ ತಾವೇ ಸರ್ವೋತ್ತಮರೆಂದು ತಿಳಿದು ಸ್ವೇಚ್ಛಾ ಚಾರಿಗಳಾಗಿ ಹೀನರಾಗಿ

ಬಲುಸೊಕ್ಕಿದವರಾಗಿ ದೂಷಿತವಾದ ಕಾವ್ಯ ಕರ್ಮವ್ಯಾಪಾರಗಳಿಂದೊಡಗೂಡಿ ಕೆಟ್ಟು ಗಬ್ಬೆದ್ದು ಹೋಗಿಬಿಟ್ಟಿರುವರೋ

ಮತ್ತಂ ಯಾವ ವಿರಕ್ತ ಜಂಗಮರು ಪರ್ಯಾಲೋಚಿಸದೆ ಅತ್ಯಾಶೆಇಂದೊಡಗೂಡಿ ಯಾವದಾದರೊಂದು ಪುಣ್ಯಕಾರ್ಯದ ನೆವದಿಂದ ಊರೂರು ದೇಶ ದೇಶ ಮನೆ ಮನೆ ಸುತ್ತಿ ಸುತ್ತಿ ತಿರಿದು ತಂದು ಕೂಡಿಟ್ಟಿದ್ದ ಧನಧಾನ್ಯದ ರಾಶಿಗಳನ್ನು ಬಡವರಾದ ಭಕ್ತ ಜನಂಗಳಿಗೆ ಕೊಟ್ಟು ಬಿಟ್ಟರೆ ಕಡಿಮೆ ಯಾದೀತು ಈ ಪದಾರ್ಥಗಳು ನನಗಿರಲಿ ನನ್ನ ಬಂಧು ಜನಗಳಿಗಿರಲೆಂದು ಮಡಗಿ ಅದನ್ನು ಹಗಲಿರಳು ಕಾಳೋರಗದಂತೆ ಕಾಯುತ್ತಾ ಗಣಿಸುತ್ತಾ ಈ ಬಂಬಾಯಿ ಬಿಳೀಶೇಟಗಳಂತೆ ಬಡ್ಡಿಲಾಭಕ್ಕಾಗಿ ಪರರಿಗೆ ಸಾಲವಂಕೊಟ್ಟು ಮತ್ತಿಷ್ಟು ಧನಕನಕಾದಿ ವಸ್ತು ಸಂಗ್ರಹವನ್ನು ಮಾಡಿ ಮಾಡುತ್ತಾ ಇರುತ್ತಿಹರೋ

ಮತ್ತಂ ಯಾವವಿರಕ್ತ ಜಂಗಮರು ನಿಜವಾದ ಆಚರಣೆಗಳನ್ನೆಲ್ಲಾ ಬಿಟ್ಟು ಜನರೊಲಿವ ಈ ಬನುಗು ಸಾಧನೆಗಳನ್ನು ಮಾಡುತ್ತಾ ಮೊದಲು ಹೆಂಗಸರ ಮುಖವನ್ನು ನೋಡುವದಿಲ್ಲವೆಂದು ಹೇಳಿಕೊಳ್ಳುತ್ತಾ ಆ ಮೇಲೆ ಮೆಲ್ಲ ಮೆಲ್ಲನೆ ಅವರ ಮುಖಗಳಂ ನೋಡಲಿಚ್ಛಿಸುತ್ತಾ ಇಚ್ಛಿಸಿದ ಪದಾರ್ಥಗಳನ್ನು ಕೊಡತಕ್ಕ ಅಷ್ಟಾವರಣಗಳನ್ನು ಅಂಗದ ಮೇಲೆ ಧರಿಸಿದ್ದಾಗ್ಯೂ ಈಲೋಕಕ್ಕೆ ಸಂಬಧ ಪಟ್ಟ ನೀಚವಿಷಯಾದಿಗಳನ್ನು ಯಾಚಿಸುತ್ತಾ ಬೀಗುತ್ತಾ ದ್ರವ್ಯದ ಗುಲಾಮರಾಗಿ ವರ್ತಿಸುತ್ತಿಹರೋ

ಮತ್ತಂ ಯಾವ ವಿರಕ್ತ ಜಂಗಮರು ಈರಾಜರ ಭಯದಲ್ಲಿ ಮತ್ತು ಈ ಪ್ರಜೆಗಳ ಭಯದಲ್ಲಿ ವಿರಕ್ತಿಯನ್ನು ಹೊಂದದೆ ಭಯಗ್ರಸ್ತರಾಗಿ ಈ ಊರು ಸೂಳಿಯರ ಹಾಂಗೆ ಹಲವು ಮಂದಿಗಳ ಮರ್ಜಿಗನುಸಾರವಾದ ನಡೆಗಳನ್ನಿಟ್ಟು ಕೊಂಡು ಸಂಸಾರಿಗಳಾಗಿ ಅನಿತ್ಯವಾದ ವಿಷಯ ವ್ಯಸನಾದಿಗಳಿಗೆ ಕುದಿಯುತ್ತಾ ಅವಿವೇಕ ಅನ್ಯಥಾಜ್ಞಾನಗಳಿಂದೊಡಗೂಡಿ ಯೇನೇನು ತಿರುಳಿಲ್ಲದ ಆಚರಣೆಗಳನ್ನು ಕೈಕೊಂಡು ಹೊರಗೆ ನೊಡುವವರ ಕಂಣಿಗೆ ಮಾತ್ರ ಒಳ್ಳೆ ಮಹಾತ್ಮರನ್ತೆ ಕಾಣಿಸಿಕೊಂಡು ಒಂದುಕಡೆ ವೀರಶೈವಮತಕ್ಕೆ ಅಳಿಗಾಲವನ್ನುಂಟು ಮಾಡತಕ್ಕಂಥಾ ವಿರುದ್ಧಾಸ್ಪದವಾದ ಕೆಲಸಗಳಂ ಮಾಡಿಸುತ್ತಾ ಮತ್ತೊಂದುಕಡೆ ಸ್ವಮತಾಭಿಮಾನದ ಉಪನ್ಯಾಸಗಳಂ ಮಾಡಿಸುತ್ತಾ ಪ್ರತ್ಯಕ್ಷ ಗೋಮುಖದ ವ್ಯಾಘ್ರಗಳಾಗಿ ವಿಷಯಾತುರರಾಗಿ ಅಧೋಗತಿಗಿಳಿದು ಹೋಗಿಬಿಟ್ಟಿರುತ್ತಿಹರೋ

ಮತ್ತಂ ಯಾರು ವೈರಾಗ್ಯ ಸಾಧ್ಯವಾಗದ ನಿಮಿತ್ಯದಿಂದ ಹೊಲಗದ್ದೆ ತೋಟ ಮುನ್ತಾದ ಮಠದ ಸೊತ್ತಿಗಾಶೆಮಾಡಿ ಕುಂಡಿಯುಲ್ಲೊಂದು ಮಣಕೌಪೀನದ ಪಿಟ್ಟಿಯನ್ನಿಟ್ಟುಕೊಂಡು ಧನಕನಕ ಮೊದಲಾದಹೊರಗಿನವಿಷಯಗಳನ್ನುಕುರಿತ್ವ

---

ಕ್ರೂರೋಕುತ್ಸಿತ ವಾಣಿಜ್ಯೋಸೇವ ಕೋನೃತ್ಯಗಾಯಕಃ। ಪಿಶುನೋ ಯಾಚಕೊ ಮೂರ್ಖೋ ಪ್ರಾಪಂಚೋನಚ ಜಂಗಮಃ ॥ ಭಿನ್ನ ಭಿನ್ನಾವಿ ದುಷ್ಟಂಚ ಯದ್ವರ್ಷಿಗಂನಪೂಜ್ಯತೆ । ಲಿಂಗಾಚಾರ ವ್ರತಭ್ರಷ್ಟಂ ಜಂಗಮಂನತು ಪೂಜ್ಯತೆ ॥ ವ್ರತಭ್ರಷ್ಟ ಮುಖಂ ದೃಷ್ಟ್ವಾ ಅಸನೆ ಶಯನೆತಥಾ । ಸಹಂಕ್ತ್ವಾ ಭೋಜನಂ ಕುರ್ಯಾದ್ರೌರ ವಂನಕಂ ವ್ರಜೇತ್ ॥

ಮನಸ್ಸಿನಿಂದೆಂದಿಗೂ ತ್ಯಾಗವಮಾಡದಿದ್ದರೂ ಮಾತಿನಲ್ಲಿ ಮಾತ್ರ ದೃಢವಾಗಿ ಇಟ್ಟುಕೊಂಡು ವಾಗ್ಜಾಲದಿಂದಲೂ ಬಹಿರಾಡಂಬರಗಳಿಂದಲೂ ಜನರಂ ವ್ಯಾ ಮುಳ್ಗೊಳಿಸಿ ಹುಲಿ ಮನೆಯಲ್ಲಿ ಹೋತು ಕೂತನ್ತೆ ಪುರ್ರಾಚಾರ್ಯರ ಪೀಠ ಪೀಠಗಳ ವೇದಿಕೆಯಮೇಲೆ ಒಳ್ಳೇ ಅಟ್ಟಹಾಸದಿಂದ ಕೂತುಕೊಂಡು ಇಲ್ಲದ ಚೇಷ್ಟೆಗಳನ್ನು ಭೋಸಡಾ ಕೆಲಸಗಳನ್ನು ಮಾಡಿ ಮಾಡುತ್ತಾ ಈ ಹಳೇಮಣಿ ಸಿನ ಕಾಯಿಗಿಂತಲೂ ಅಗ್ಗವಾಗಿ ಹೋಗಿ ಬಿಟ್ಟರುವರೋ ಅಂತಹ ನಾಮಧಾ ರಿಗಳಾದ ವಿರಕ್ತ ಜಂಗಮರ ಮುಖವನ್ನು ಯೋಗ್ಯರಾದ ಸತ್ಪುರುಷರು ನೋ ಡಕೂಡದು ನೋಡಿದ್ದಾದರೆ ನರಕವಂ ಪಡೆಯುತ್ತಾರೆಂದು ಆಗ್ರಂಥಕರ್ತರು ಹೇ ಳಿರುತ್ತಾರಲ್ಲದೆ ಕೇವಲ ನಿರ್ಮಲ ಜ್ಞಾನಸಂಪನ್ನರಾಗಿಯೂ ಇಹಪರಭೋ ಗವಿದೂರರಾಗಿಯೂ ಸದಾಚಾರ ಸಂಪನ್ನರಾಗಿಯೂ ಸಕಲ ನಿಗಮಾಗಮ ಗೀ ತಶಾಸ್ತ್ರಾರ್ಥಂಗಳನ್ನರಿತವರಾಗಿಯೂ ಭಸ್ಮ ನಿಷ್ಠರಾಗಿಯೂ ಜಿತೇಂದ್ರಿಯರ ಳಾಗಿಯೂ ಇರುವ ಈ ನಿಜ ಜಂಗಮರ ಮುಖವನ್ನು ಯೋಗ್ಯರಾದ ಸತ್ಪುರು ಷರು ನೋಡಕೂಡದು ನೋಡಿದ್ದಾದರೆನರಕವಂ ಪಡೆಯುತ್ತಾರೆಂದೇನು ಆಗ್ರಂ ಥಕರ್ತರೆಲ್ಲಿಯೂ ಹೇಳಿಲ್ಲ.

ಅಂತಪ್ಪ ನಿಜಜಂಗಮರ ಪವಿತ್ರವಾದ ಪಾದಾರವಿಂದಗಳನ್ನು ಆ ಗ್ರಂಥ ಕರ್ತರೆಲ್ಲರೂ ಅನೇಕ ಗದ್ಯಪದ್ಯಗಳಿಂದ ಕಾಳಿದಾಸಾದಿ ಮಹಾಕವಿಗಳನ್ತೆ ವರ್ಣಿ ಸಿರುವದಲ್ಲದೆ ಅತ್ಯಂತ ಸಂಭ್ರಮದಿಂದವರ ದಿವ್ಯವಾದ ಪಾದಕಮಲವನ್ನು ತಮ್ಮ ತಲೆಯಮೇಲೆ ಹೊತ್ತುಕೊಂಡು ನಾಟ್ಯವನ್ನಾಡಿ ಬಿಟ್ಟದ್ದಾರೆಂಬುದನ್ನು ಅವರವರ ಗ್ರಂಥಗಳೇ ನಿರೂಪಿಸುತ್ತಲಿವೆ ಈ ಮಾತಿನಲ್ಲಿ ಸಂಶಯವೇನೂ ಇರುವದಿಲ್ಲ.

ಆ ನಿಜಜಂಗಮನೆಂದರೆ ಯಾರು ಅವನು ಹ್ಯಾಗಿರುವನು ಯಂದರೆ

ಜಾನಂತ್ಯತಿಶಯಾ ದ್ಯೇತುಶಿವಂ ವಿಶ್ವಪ್ರಕಾಶಕಂ ।
ಸ್ವಸ್ವರೂಪ ತಯಾತೇತು ಜಂಗಮಾ ಇತಿಕೀರ್ತಿತಾಃ ॥

ಯಂಬ ಶಿವಾಗಮೋಕ್ತಿಯನ್ತೆ ಯಾರು ಈಬರೀ ಸುಳ್ಳಾದ ಹೊರಗಿನ ಪ್ರಪಂಚವನ್ನು ಮರೆದು ಬಿಟ್ಟು ಅತಿಶಯವಾದ ಶಿವಾಧಿಕ್ಯಜ್ಞಾನದಿಂದ ಸ್ವಸ್ವರೂ ಪವನ್ನು ತಿಳಿದುಕೊಂಡು ಶುದ್ಧಾನ್ತಃ ಕರಣರಾಗಿ ಅತಿ ನಿರ್ಮಲರಾಗಿ ಇರುತ್ತಿ ಹರೋ ಅವರೇ ನಿಜಜಂಗಮರೆಂದು ಹೇಳಿಸಿ ಕೊಳ್ಳುತ್ತಿಹರು ಮತ್ತಂ ಯಾರು ನಿ ಜ ಜಂಗಮರು ಯಂದರೆ

ಯೇಪಸ್ಯಂತಿ ಜಗಜ್ಜಾಲಂಚಿದ್ರೂಪಂಶಿವಯೋಗತಃ ।
ನಿರ್ಧೂತ ಮಲಸಂಸರ್ಗಾಸ್ತೇ ಸ್ಯುಃ ಶಿವಯೋಗಿನಃ ॥

ಎಂಬೀ ಶಿದ್ಧಾನ್ತ ಶಿಖಾಮಣಿ ವಚನ ರೀತ್ಯಾ ಯಾರು ಈ ಆಶ್ಚರ್ಯ ಕರ ವಾದ ಶಿವಯೋಗ ಬಲದಿಂದ ಜೀವ ಮೊದಲಾದ ಸಮಸ್ತ ದೋಷಗಳನ್ನು ಪರಿಹರಿಸಿಕೊಂಡು ಈ ಅನಿತ್ಯವಾದ ಜಗಜ್ಜಾಲವನ್ನು ಅಂದರೆ ಕನಸಿನ ಸಿರಿ ಯಸ್ತಿರುವ ಈ ಸುಳ್ಳಾದ ಪ್ರಪಂಚವನ್ನು ಜ್ಞಾನ ದೃಷ್ಟಿಯಿಂದ ಶಿವ ಸ್ವರೂ ಪವೇ ಸರಿ ಯಂದುತಿಳಿದುಕಾಣುತ್ತಿಹರೋ ಅವರೇ ನಿಜ ಜಂಗಮರೆಂದು ಹೇಳಿಸಿ ಕೊಳ್ಳುತ್ತಿಹರು... ಮತ್ತಂ ಯಾರು ನಿಜ ಜಂಗಮರು ಯಂದರೆ

ಶ್ಲೋಕ ॥ಜಿತಕಾಮಾಜಿತಕ್ರೋಧಾಮೋಹ ಗ್ರಂಧಿವಿಭೇದನಾಃ |
ಸಮಲೋಷ್ಟಾಶ್ಮಕನ ಕಾಸ್ಸಾಧವ ಶ್ಶಿವಯೋಗಿನಃ ॥

ಎಂಬ ಶಿವಾಗಮವಚನ ರೀತ್ಯಾ ಯಾರು ಈ ಅಸಹ್ಯಕರವಾದ ಕಾಮ ಕ್ರೋಧಾದಿ ಅರಿಕುಳವನ್ನು ಗೆದ್ದುಕೊಂಡು ಮೋಹವೆಂಬ ಬೆಟ್ಟವನ್ನು ವಿಭೇ ದಿಸಿ ಕಲ್ಲು ಮಣ್ಣು ಚಿನ್ನ ಇವೆಲ್ಲವೂ ಒಂದೇ ಯಂದು ತಿಳಿದವರಾಗಿ ಮಹಾ ಪುಣ್ಯ ಪುರುಷರುಗಳಾಗಿ ವರ್ತಿಸುತ್ತಾ ಇರುತ್ತಿಹರೋ ಅವರೇ ನಿಜ ಜಂಗಮ ರೆಂದು ಹೇಳಿಸಿಕೊಳ್ಳುತ್ತಿಹರು. ಮತ್ತಂ ಯಾರು ನಿಜ ಜಂಗಮರು ಯಂದರೆ

ಶ್ಲೋಕ ॥ ಧನಧಾನ್ಯೇಚ ವಸ್ತ್ರೇಚಾ ಫಲೇ ಪುಷ್ಪೆ ಸ್ತ್ರಿ ಯಾಮಪಿ ।
ಕಶ್ಚಿತ್ಕಾಮಲವೋ ನಾಸ್ತಿ ಸ ನಿರಾಶಶ್ಚ ಜಂಗಮಃ ॥

ಯಂಬೀ ಶಿದ್ಧಾನ್ತೋಕ್ತಿ ಯನ್ತೆ ಯಾರು ಹೆಚ್ಚಿನ ಧನ ಧಾನ್ಯಗಳಲ್ಲಿ ಮಿಕ್ಕಿ ನವವಸ್ತ್ರಗಳಲ್ಲಿ ಅನರ್ಪಿತವಾದ ಫಲ ಪುಷ್ಪಾದಿಗಳಲ್ಲಿ ಸ್ತ್ರೀಯರಲ್ಲಿ ಸ್ವಲ್ಪವಾದರೂ ಆಶೆಯನ್ನಿಕ್ಕದೆ ನಿರಾಶಕರಾಗಿ ಒಳ್ಳೆದ ಯಾಶಾಲಿಗಳಾಗಿ ಮ ಹಾ ಶಿವಯೋಗ ಶೀಲರಾಗಿ ವರ್ತಿಸುತ್ತಾ ಇರುತ್ತಿಹರೋ ಅವರೇ ನಿಜ ಜಂ ಗಮರೆಂದು ಹೇಳಿಸಿಕೊಳ್ಳುತ್ತಿಹರು........ ಮತ್ತಂ ಯಾರು ನಿಜ ಜಂಗಮರು ಯಂದರೆ

ಶ್ಲೋಕ ॥ ನಿರ್ಮದೋ ನಿರಹಂಕಾರೋ ನಿಸ್ಸಂಗೋ ನಿಷ್ಪರಿಗ್ರಹಃ
ನಿರಾಶೀ ಚೈವನಿರ್ಮಾಯೋನಿರ್ದೇಹೀ ( ಸಚ ) ನಿಜ ಜಂಗಮಃ॥

ಯಂಬ ಶಿವಾಗಮ ವಚನರೀತ್ಯಾ ಯಾರು ಶಿವ ಭಕ್ತಿ ಶಿವಜ್ಞಾನ ಧ್ಯಾನ ಸಂಪತ್ತಿಯಿಂದ ಈ ಕೆಟ್ಟ ಅರಿಷ್ಟ ಮಾಯೆಯನ್ನು ಗೆದ್ದುಕೊಂಡು ಭೇದ ಭ್ರಾ ನ್ತಿಯನ್ನೆಲ್ಲಾ ಬಿಟ್ಟು ಕೊಟ್ಟು ಆಶಾಸೂಯಾದ್ಯ ಹಂಕಾರಗಳನ್ನು ಹೊಂದದ ನಿರ್ಲಿಪ್ತರಾಗಿ ಒಳ್ಳೇ ನಿಸ್ಸಂಗಿಗಳಾಗಿ ಇರುತ್ತಿಹರೋ ಅವರೇ ನಿಜ ಜಂಗಮ ರೆಂದು ಹೇಳಿಸಿಕೊಳ್ಳುತ್ತಿಹರು

ಮತ್ತಂ ಆ ಶಿವಯೋಗಿಗಳಾದ ವಿರಕ್ತಜಂಗಮರು ಹ್ಯಾಗಿರುವರು ಯಂದರೆ

ಶ್ಲೋಕ ॥ ನಸನ್ಮಾನೇಷು ಸಂಪ್ರೀತಿಂ ನಾಪಮಾನೇಷುಚಾವ್ಯಥಾಂ
ಕುರ್ವಾಣಸ್ಸಂಚರೇ ದ್ಯೋಗಿ ಕೂಟಸ್ಥೆ ಸ್ವಾತ್ಮನಿಸ್ಥಿತಃ॥

ಅಂದರೆ ಆತ್ಮಾನಾತ್ಮ ವಿವೇಕ ಬಲದಿಂಸ್ವಯಂ ಬ್ರಹ್ಮ ಸ್ವರೂಪನಾದ ಆ ಶಿವಯೋಗೀಶ್ವರನು ಸನ್ಮಾನಂಗಳಲ್ಲಿ ಮತ್ತು ಅವಮಾನಂಗಳಲ್ಲಿ ಸಹ ಸಮ ಬುದ್ಧಿಯುಳ್ಳವನಾಗಿ ಅತ್ಯಂತ ಪರಿಶುದ್ಧವಾದ ನಡವಳಿಕೆಯಿಂದೊಡಗೂಡಿ ತನ್ನ ಇಚ್ಛೆ ಬಂದ ನೈಪುಣ್ಯಾರಣ್ಯಗಳಲ್ಲಿ ಸಂಚರಿಸುತ್ತಾ ಇರುತ್ತಿಹನು—— ಮತ್ತಂ ಹ್ಯಾಗಿರುವನು ಯೆಂದರೆ

ಶ್ಲೋಕ ॥ ಅಪ್ರಾಕೃತೈರ್ಗುಣೈಸ್ಸ್ವೀಯೈಸ್ಸರ್ವಂ ವಿಸ್ಮಾಪಯ ಜ್ಜನಂ ।
ಅದ್ವೈತಪರ ಮಾನಂದ ಮುದಿತೋದೇಹಿ ವಜ್ಜರೇತ್॥

ಅಂದರೆ ಲಿಂಗಾಂಗ ಸಾಮರಸ್ಯದಿಂದುಂಟಾದ ಬ್ರಹ್ಮಾನಂದದಿಂ ಪ್ರಹೃಷ್ಟನಾದ ಶಿವಯೋಗೀಶ್ವರನು ಅಪ್ರಾಕೃತ ಗುಣಗಳಿಂದ ಅಂದರೆ ನಿರ್ದೋಷವಾದ ತನ್ನ ನಡವಳಿಕೆಗಳಿಂದ ಸಮಸ್ತ ಲೋಕದ ಜನರನ್ನು ವಿಸ್ಮಯಗೊಳಿಸಿದೇಹಿ ಯನ್ತೆಯಲ್ಲಾ ಕಡೆಗೂ ಸಂಚರಿಸುತ್ತಾ ಇರುತ್ತಿಹನು......ಮತ್ತಂ ಹ್ಯಾಗಿರುವನು ಯೆಂದರೆ

ಶ್ಲೋಕ ॥ ಯದೃಚ್ಛಾಲಾಭ ಸಂತುಷ್ಟೋ ಭಸ್ಮನಿಷ್ಠೋ ಜಿತೇಂದ್ರಿಯಃ ।
ಸಮವೃತ್ತಿರ್ಭವೇ ದ್ಯೋಗಿ ಭಿಕ್ಷುಕೇವಾನ್ಯಪೇಥವಾ ॥

ಅಂದರೆ ದೊರತಷ್ಟರಲ್ಲಿ ತೃಪ್ತನಾಗಿ ಭಸ್ಮ ನಿಷ್ಠನಾಗಿ ಒಳ್ಳೇ ಜಿತೇಂದ್ರಿಯನಾಗಿ ಮತ್ತು ಭಿಕ್ಷುಕನಲ್ಲಿಯೂ ರಾಜನಲ್ಲಿಯೂ ಸಹ ಸಮ ಬುದ್ಧಿಯುಳ್ಳವನಾಗಿ ಕೇವಲ ಆನಂದಮಯ ಮೂರ್ತಿಯಾಗಿ ಭವವಿದೂರನಾಗಿ ಇರುತ್ತಿಹನು.........ಮತ್ತಂಹ್ಯಾಗಿರುವನು ಯಂದರೆ

ಶ್ಲೋಕ ॥ ಧ್ಯಾನಂಶ್ಶೈವಂತಥಾ ಜ್ಞಾನಂ× ಭಿಕ್ಷ್ಯೈಕಾಂತ ಸೀಲತಾ ।
ಏತೆ ಚತ್ವಾರಿಕವರ್ಮಾಣಿನ ಪಂಚಮ ಮಿಹೇಷ್ಯತೆ ॥

ಅಂದರೆ ಶಿವಾಧಿಕ್ಯ ಜ್ಞಾನ ಶಿವ ಚಿಂತನ ಏಕಾಂತವಾಸ ಭಿಕ್ಷಾಶನ ಯಂಬ ಈ ನಾಲ್ಕು ಕೆಲಸಗಳಲ್ಲಿ ಮಾತ್ರ ತತ್ಪರನಾಗಿ ಉಳಿದ ಈ ಲೌಕಿಕ ಸಂಬಂಧವಾದ ಭೋಗ ಭಾಗ್ಯಾದಿ ವಿಷಯಗಳನ್ನು ಯಡಗಾಲಿನಿಂದ ಸಹ ಮುಟ್ಟದೆ ಬಿಟ್ಟು ಕೊಟ್ಟು ಮನೋಹರವಾದ ಗಿರಿ ನದಿ ವನಗಳಲ್ಲಾವದಾದರೊಂದು ಕಡೆ ವಾಸ ಮಾಡಿಕೊಂಡು ಪ್ರತ್ಯಕ್ಷ ಪರ ಶಿವಸ್ವರೂಪನೇ ಆಗಿರುತ್ತಿಹನು

---

ಗುರು ಕಲ್ಪಿತ ಭಿಕ್ಷಾನ್ನಂ ಅಕಲ್ಪಿತ ಭಿಕ್ಷಾಶಯಾ ।ದ್ವಯೋರ್ಹೀನಂ ದೇವಿ ಭುಂಕ್ತೆ ಸಪಾಪಿಜಂಗಮಾಧಮಃ

ಮತ್ತಂ ಯಾರು ಉತ್ತಮವಾದ ಜಂಗಮಸ್ಥಲವನ್ನು ಹೊಂದಿದವರುಯಂದರೆ-

ಶ್ಲೋಕ-॥ ಗುರುಭಕ್ತಿ ಶ್ಶಿವೇಭಕ್ತ ಶ್ಶಿವಧ್ಯಾನಪರಾಯಣಃ॥
ನಿತ್ಯ ಮಭ್ಯಾಸಯೋಗಶ್ಚ ಸ್ವಯಂ ಭೂರ್ಜಂಗಮೋತ್ತಮಃ॥

ಯಂಬ ವೀರಾಗಮವಚನದಂತೆಯಾರು ಶಿವನಿಗಿಂತಲೂ ತಾವು ಅಧಿಕರೆಂದು ತಿಳಿಯದೆ ತಾವು ಶಿವಭಕ್ತರೆಂದೂ ಶಿವನು ತಮಗೆ ಪೂಜ್ಯನಾದ ಸ್ವಾಮಿಯೆಂದೂ ತಿಳಿದು † ಸ್ವಪಾದೋದಕವನ್ನು ತಮ್ಮಿಷ್ಟಲಿಂಗಕ್ಕೆರಿಯದೆ ಶಿವಭಕ್ತಿ ಶಿವಧ್ಯಾನಶಿವಯೋಗಾದಿಗಳಿಂದೊಡಗೂಡಿಸತಿ ಪತಿನ್ಯಾಯವನ್ನರಿತು ವರ್ತಿಸುತ್ತಿಹರೋ ಅವರೇ ಉತ್ತಮವಾದ ಜಂಗಮಸ್ಥಲವನ್ನು ಹೊಂದಿದವರು

ಬಳಿಕೀ ಪ್ರಕಾರದಿಂ ಹೇಳಲ್ಪಟ್ಟ ಉತ್ತಮಸ್ಥಲ ಜಂಗಮರಾರುಂಟೋ ಅವರೇ ಸರ್ವಾಧಿಕಾರಿಗಳೆಂಬ ವಿಷಯದಲ್ಲಿ ಹೇಳಲ್ಪಡುತ್ತೆ

ಶ್ಲೋಕ॥ ದೀಕ್ಷಾ ಮೂರ್ತಿ ರ್ಗುರುರ್ದೇವೋ ಪೂಜಾ ಮೂರ್ತಿಸ್ಸದಾಶಿವಃ
ದೀಕ್ಷಾ ಪೂಜಾತಿ ಶಿಕ್ಷಾ ಚ ಸರ್ವ ಕರ್ತಾ ಚ ಜಂಗಮಃ

ಅಂದರೆ ಯಾರು ಪಂಚ ಸಿಂಹಾಸನಾಧಿಪತಿಗಳಾಗಲಿ ಪಟ್ಟಚರ ಪತಿಗಳಾಗಲಿ ಸಕಲ ಸೌಭಾಗ್ಯದೊಡನೆ ಕೂಡಲ್ಪಟ್ಟ ಮಹದೈಶ್ವರ್ಯ ಸಂಪನ್ನರಾದ ರಾಜಾಧಿ ರಾಜರಾಗಲಿ ಇವರೊಳಗೆ ಯಾರಾದರೂ ಸೊಕ್ಕಿನಿಂದ ಗುರುಸೇವಾತಿಥಿ ಸತ್ಕಾರಮಂ ತೊರದು ಬಾಹ್ಯ ಬ್ರಹ್ಮಿಗಳಾಗಿ ಜಗತ್ತಿನಲ್ಲಿ ಅನಾಚಾರವೆಂಬ ಬೆಳೆಯನ್ನಿಟ್ಟು ಮದಾಂಧರಾಗಿ ಪರ ಸ್ತ್ರೀ ಪರ ಧನ ಈ ಮೊದಲಾದ ನ್ಯಾಯ ವಸ್ತುಗಳಂ ಸಹ ಅಪಲಪಿಸುತ್ತ ಸಕಲ ಸ್ತ್ರೀ ಪುರುಷರ ಮನಸ್ಸನ್ನು ಕೆಡಿಸಿ ಕಡೆಗೆ ತಾವೂ ಕೆಟ್ಟು ಹೋಗಿ ಶಾಸ್ತ್ರ ವಿರುದ್ಧವಾದ ಕಾರ್ಯಗಳಂ ಮಾ-

---

† ಗುರುಜಂಗಮರು ತಮ್ಮ ಪಾದೋದಕವನ್ನು ತಮ್ಮ ಲಿಂಗಕ್ಕೆರದು ಸೇವಿಸಬೇಕೆಂದು ಹೇಳತಕ್ಕಂಥಾ ಪ್ರಮಾಣ ಒಂದಾದರೂ ಇಲ್ಲವಾದುದರಿಂದ ಆ ದುಷ್ಟ ಪದ್ಧತಿಯನ್ನು ಮೊದಲು ಗುರುಜಂಗಮರು ದೂರೀಕರಿಸಿ ಬಿಟ್ಟು ಬಿಡಬೇಕು. ಒಂದು ಪಕ್ಷ ಬಿಟ್ಟುಬಿಡದಿದ್ದರೆ ಅದರಿಂದ ನರಕವೇ ಫಲವಾದೀತಲ್ಲದೆ ಮತ್ತೇನು ಆಗಲಿಕ್ಕಿಲ್ಲಾ—ಪತಿರ್ಲಿಂಗಂ ಸತೀಚಾಹಂ ಹೃದಿಯುಕ್ತ ಸ್ವಯಂಪ್ರಭುಃ... ಯಂಬಶರಣಸ್ಥಲೋಕ್ತ ವಚನದತ್ತಿಣಿಂ ಸತಿಪತಿನ್ಯಾಯವುಂಟಾಗಿರುವದರಿಂ ತಮ್ಮಿಷ್ಟಲಿಂಗಗಳಿಗೆ ತಾವು ಸತಿಯರಾಗಬೇಕಲ್ಲದೆ ತಮ್ಮಿಷ್ಟಲಿಂಗಗಳಿಗೆ ತಾವು ಪತಿಗಳಾಗುವದಿಲ್ಲ ಮತ್ತು ತಮಗೆ ತಾವು ಗುರುಜಂಗಮರೂ ಆಗುವದಿಲ್ಲಾ ತಮಗೆ ಗುರುಜಂಗಮರ ಪಾದೋದಕ ಪ್ರಸಾದಗಳು ಬೇಕಾಗಿದ್ದಲ್ಲಿ ತಮಗೆ ಭಿನ್ನರಾದ ಗುರುಜಂಗಮರು ಇದ್ದೇ ಇರುವರು ಆ ಗುರುಜಂಗಮರ ಪಾದವನ್ನು ಯಥೋಚಿತವಾಗಿ ಪೂಜಿಸಿ ತೀರ್ಥಪ್ರಸಾದಗಳಂ ಪಡೆದು— ಚರಪಾದೋದಕಂ ಲಿಂಗೆ ಸ್ನಾನಂ ಪ್ರಸಾದಮರ್ಪಯೇತ್......ಯಂಬ ಈ ವಿಧಿವಚನವನ್ನನುಸರಿಸಿ ಚರಪಾದೋದಕವನ್ನು ತಮ್ಮಿಷ್ಟಲಿಂಗಕ್ಕಭಿಷೇಕಿಸಿ ಅವನ್ನು ಪಾನವಂ ಮಾಡಿ ನಂತರ ಚರಭುಕ್ತಶೇಷವನ್ನು ಲಿಂಗಕ್ಕರ್ಪಿಸಿ ಸೇವಿಸಬೇಕು ಇನ್ನೂ ಈ ವಿಷಯವನ್ನು ವಾದಕಾಂಕ್ಷಿಗಳಿಗೆ ಯಮ್ಮಿಂದುಕ್ತವಾದ ದುರ್ವಾದಿ ವರ್ಗಭೈರವವೆಂಬ ಗ್ರಂಥದಲ್ಲಿ ಬಹಳ ವಿಸ್ತಾರವಾಗಿ ತೋರಿಸಿದ್ದೇವೆ.

ಡುತ್ತಾ ಇಪ್ಪರೆ ಅಂತಹಸಮಯದಲ್ಲಿ ಕೂಡಲೇ ಅವರನ್ನು ಹಿಡಿದು ನೆತ್ತಿಯ ಮೇಲೆ ಗುದ್ದಿ ಕುಳ್ಳಿರಿಸಿ ನೀನು ಹೀಗೆಹೀಗೆಯೇ ಆಚರಿಸಬೇಕು ನೀನು ಹೀಗೆ ಹೀಗೆಯೇ ವರ್ತಿಸಬೇಕು. ಈ ನಮ್ಮ ಮಾತಂ ವಿಚಾರಿ ನಡೆದು ಬಿಟ್ಟರೆ ನಿಮಗೆ ಮುಂದೆ ಪರಿಣಾಮವಾಗಲಿಕ್ಕಿಲ್ಲವೆಂದು ಬುದ್ಧಿವಾದವಂ ಪೇಳಿಕೊಟ್ಟು ಶಿವ ತತ್ವದ ರಹಸ್ಯಾರ್ಥವುಂ ಅವರಿಗೆ ಬೋಧಿಸುತ್ತಾ ಅಸಾಧಾರಣವಾದ ಸ್ವಾತಂತ್ರ್ಯಬಲದಿಂಜಗತ್ಪತಿಗಳಾಗಿರುತ್ತಿಹರೋ ಅವರೇ ಸ್ವಾಧಿಕಾರವುಳ್ಳ ಜಂಗಮರು

ಇಂತಧಿಕಾರವುಳ್ಳ ಜಂಗಮನ ಲಕ್ಷಣವೇನೆನೆ

ಶ್ಲೋಕ-॥ತೃಣಂ ಬ್ರಹ್ಮಾತೃಣಂ ವಿಷ್ಣುತೃಣಂ ತ್ರಿಭುವನಂಜಗತ್ ।
ತೃಣಂದೇವಪದಂ ಯಸ್ಯತಚ್ಚಜಂಗಮಲಕ್ಷಣಂ ॥

ಅಂದರೆ ಬ್ರಹ್ಮ ಪಟ್ಟ ವಿಷ್ಣು ಪಟ್ಟ ಕಡೆಗೆ ದೇವಪಟ್ಟ ಮತ್ತು ಸ್ವರ್ಗಮರ್ತ್ಯಪಾತಾಳ ಇವೇ ಮೊದಲಾದ ಅಣಿಮಾದ್ಯಷ್ಟೈಶ್ವರ್ಯಗಳನ್ನು ಸಹ ಒಂದು ಹುಲ್ಲು ಕಡ್ಡಿಗಿಂತಲೂ ಕಡೆಮಾಡಿ ಬಿಟ್ಟು ಸದಾಚಾರವೇ ಸಕಲ ಸೌಭಾಗ್ಯವೆಂದು ಪರಿಭಾವಿಸಿ ಯಾವ ಪದಾರ್ಥವನ್ನೇ ಆಗಲಿ ಈ ಕೊಳಕು ಸಂಸಾರಿಗಳಲ್ಲಿ ಜಾಯ್ದೆರದು ಬೇಡಿಕೊಳ್ಳನೆ ದುರಹಂಕಾರಿಗಳಾದ ಈ ಧನಮಾತರನ್ನು ಈ ರಾಜರನ್ನು ಸಹ ಸ್ವಪ್ನದಲ್ಲಿಯಾದರೂ ಆಶ್ರಯ ಮಾಡದೆ ಸ್ವೇಚ್ಛೆಯಿಂದ ಈ ಲೋಕದೊಳ್ ಅಲ್ಲಲ್ಲಿ ಸಲ್ಲೀಲೆಯಿಂದ ಸಂಚರಿಸುತ್ತಾ ಇರುತ್ತಿಹನು ಇಂತಪ್ಪ ಅಧಿಕಾರ ಲಕ್ಷಣವುಳ್ಳ ವಿರಕ್ತ ಜಂಗಮರ

ಪಾದಕ್ಕೆ ಶಾಶ್ವತವಾದ ಭೋಗಮೋಕ್ಷಗಳನ್ನು ಪಡೆದು ಸುಖಿಸಬೇಕೆಂಬಪೇಕ್ಷೆಯುಳ್ಳ ಶಿವಭಕ್ತ ಜನಂಗಳು ತಮ್ಮತನುಮನಕರಣಾದಿಗಳನ್ನು ವಂಚಿಸದೆ ಹಾಗೆ ಸಮರ್ಪಿಸಿ ಅವರ ಪರಿಮುಖದಿಂದಲೇ ಶಿವಜ್ಞಾನೋಪದೇಶಾಶೀರ್ವಾದಗಳನ್ನು ತೆಗೆದುಕೊಳ್ಳಬೇಕೆಂಬುದೇ ನಮ್ಮ ಪೂರ್ವಾಚಾರ್ಯರ ಮತವಾಗಿರುತ್ತೆ ಇಂತಪ್ಪಮಹಾನುಭಾವರಾದ ವಿರಕ್ತ ಜಂಗಮರ ಅತಿಶಯವನ್ನೇ ಶೃತಿಸ್ಮೃತೀತಿಹಾಸ ಪುರಾಣಾದಿವಚನಗಳು ಬಿಡದೆ ಕೊಂಡಾಡುತ್ತಲಿವೆ. ಇಂತಪ್ಪ ಸತ್ಪುರುಷರಾದ ವಿರಕ್ತ ಜಂಗಮರನ್ನು ಯಾರು ನಂಬಿ ಆಶ್ರಯ ಮಾಡಿಕೊಂಡಿರುತ್ತಾರೋ ಅವರು ನಿಜವಾಗಿ ಈ ಸಂಸಾರವೆಂಬ ಸಾಗರವನ್ನು ದಾಂಟಿ ನಿರಾಯಾಸದಿಂದ ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಪಡೆದುಕೊಳ್ಳುತ್ತಾರೆ ಈ ಮಾತಿನಲ್ಲಿ ಸಂಶಯವೇನೂ ಇರುವದಿಲ್ಲ ಈ ಶಿವಯೋಗಿಗಳಲ್ಲಿ ಇಂತಕ್ಕಂಥ ಶ

---

ಶಿವ ರಹಸ್ಯದಲ್ಲಿ——ಆಚಾರಃ ಪರಮೋಧರ್ಮಃ ಆಚಾರಃ ಪರಮಂ ಧನಂ। ಸದಾಚಾರೇಣವೇ ವಶ್ಯಂ ರುಣಿತ್ತ್ವಂಚ ಪದಾನನೆ................

ಕ್ರಿಯೆಯು ಬಹಳ ಅತ್ಯದ್ಭುತವಾದಂಥಾದ್ದು ಇವರ ಮಹಿಮೆಗಳನ್ನು ಅಷ್ಟು ಇಷ್ಟೆಂದು ತಿಳಿದು ಲೆಕ್ಕ ಮಾಡಿ ಹೇಳುವದಕ್ಕೆ ಸಹಸ್ರನಾಲಿಗೆಯುಳ್ಳ ಆದಿಶೇಷನಿಗೂ ಸಹ ಬರುವ ಹಾಗಿಲ್ಲ ಅದು ಕಾರಣ ಈ ಶಿವಯೋಗಿಗಳಾದ ವಿರಕ್ತ ಜಂಗಮರ ದರ್ಶನವು ಸರ್ವ ಪಾಪಗಳನ್ನು ವಿನಾಶ ಮಾಡಿ ಸಕಲ ಸಂಪದಾದಿಗಳನ್ನುಂಟುಮಾಡಿಕೊಡುವದು ಇವರ ಪೂಜೆಯು ಸಂಸಾರದ ಕುಣಿಕೆಯನ್ನು ತಪ್ಪಿಸಿ ಜಗಜ್ಜನ್ಮಾದಿಕಾರಣನಾದ ಶ್ರೀ ಮಹಾದೇವನ ಪ್ರೀತಿಯುಸ್ನುಂಟು

ಮಾಡಿ ಕೊಡುವದು ಇವರ ಸ್ಪರ್ಶನವು ಸರ್ವ ಕ್ಲೇಶಂಗಳನ್ನಟ್ಟಿ ಮೋಕ್ಷ ದಾಯಕ ಮಾದ ಸಮ್ಯಜ್ಞಾನವನ್ನುಂಟು ಮಾಡಿ ಕೊಡುವದು ಅತ್ಯಂತ ಚಪಲವಾದ ಮನಸ್ಸನ್ನು ನಿಜಾನಂದ ಸಿದ್ಧಿ ಗೋಸ್ಕರ ವಶ ಪಡಿಸಿಕೊಂಡಿರುವ ಶಾಂತಿ ನಿಷ್ಠಾಪರರಾದ ವಿರಕ್ತ ಜಂಗಮರ ಉಪದೇಶಾಶೀರ್ವಾದಗಳಿಂದ ಲೋಕದಲ್ಲಿ ಯಾವ ಫಲ ಪುತಾನೆ ಶುಲಭವಾಗಿ ಸಿದ್ಧಿಸುವದಿಲ್ಲ ಯಲ್ಲವೂ ಶುಲಭವಾಗಿ ಸಿದ್ಧಿಸೇ ಸಿದ್ಧಿಸುವವು ಈ ವಿಷಯದಲ್ಲಿ ಅನೇಕ ದೃಷ್ಟಾಂತಗಳನ್ನು ಪ್ರಬಲವಾದ ಶಾಸ್ತ್ರಾಧಾರಗಳನ್ನು ಕೊಡಬಹುದಾದರೂ ಉಪದೇಶವು ಬಾಹುಲ್ಯವಾಗುವದೆಂಬ ಭೀತಿಯಿಂದ ಇಲ್ಲಿಗೆ ವಿರಮಿಸಬೇಕಾಯಿತು.

ಮುಖ್ಯವಾಗಿ ಯಾರು ಶಾಸ್ತ್ರ ವಿರುದ್ಧವಾದ ನಡವಳಿಕೆಗಳನ್ನು ಬಿಸುಟವಿವೇಕ ಸಂಪನ್ನರಾದ ವಿರಕ್ತರಿಗೂ ಸತ್ಯವ್ರತೋಕ್ತಿ ಸಂಪನ್ನರಾದ ಪೂರ್ವದ ಗುರುಗಳಿಗೂ ಅನ್ಯಸಾದವನಲ್ಲಿ ಉಪದೇಶವನ್ನು ತೆಗೆದುಕೊಳ್ಳದೆ ಅವರೀರ್ವರ ಪಂಮುಖದಿಂದ ಕ್ರಮವಾಗಿ ದೀಕ್ಷಾನುಗ್ರಹವನ್ನು ಪಡೆದುಕೊಳ್ಳುತ್ತಾರೋ ಅವರಿಗೆ ಮಾತ್ರ ಬಂಧತ್ರಯ ತಪ್ಪಿ ಶಿವ ಪೂಜಾರ್ಹತೆಯೂ ಗುರುಲಿಂಗ ಜಂಗಮರ ಪಾದೋದಕ ಪ್ರಸಾದಗಳನ್ನು ಸೇವಿಸುವ ಅಧಿಕಾರವೂ ಪರಾಪರ ಮುಕ್ತಿಯೂ ಪಾತ್ರತ್ವವೂ ಇವೆಲ್ಲವೂ ಶುಲಭವಾಗಿ ಶಿಕ್ಕುವವಲ್ಲದೆ ಅವರ ವಿನಃ ಈ ದೀಕ್ಷಾನುಗ್ರಹ ವಿಲ್ಲದ ಪಾಷಾಣ ಲಿಂಗಧಾರಿಗಳಿಗೆ ಮಾತ್ರ ಶುಲಭವಾಗಿ ಸಿಕ್ಕಲಾರವು ಆದುದರಿಂದ ಲಿಂಗಾಂಗ ಸಂಬಂಧಿಗಳಾದ ಸ್ತ್ರೀ ಪುರುಷರು ಅನ್ಯರು ಮಾಡುವ ಹೀನ ಬೋಧೆಗಳನ್ನೊಡಂಬಟ್ಟು ವೇದ ಪುರಾಣಾಗಮಸಾರ ಮಪ್ಪ ಶುದ್ಧವೀರಶೈವಾಚಾರ ಮಾರ್ಗವನ್ನು ದಾಸೀನ ಮಾಡಿ ಅಗಸರ ನಾಯಿಯಂತಾಗದೆ ಆದಿವ್ಯ ಪರಶಿವನ ರೂಪಾಂತರಗಳಾದ ನಿಜಗುರು ಜಂಗಮರ ಪರಿಮುಖದಿಂದ ದೀಕ್ಷಾನುಗ್ರಹವನ್ನು ಹೊಂದಿ ದುಷ್ಪಾರವಾದ ಈ ಶೋಕ ಸಮುದ್ರವನ್ನು ದಾಂಟಿ ಮಲಪರಿಪಾಕಾದಿ ಕ್ರಮಂಗೋಗಂಬಡೆದು ವೀರಶೈವ ಧರ್ಮಕರ್ಮಂಗಳಿಂ ಕೃತಕೃತ್ಯರಾಗಿ ಸರ್ವದಾ ಲಿಂಗ ಪೂಜಾ ಪರಾಯಣರಾಗಿ ಸತ್ಯವಾದಿಗಳಾಗಿ ನಮ್ರವಿನಯ ದಯ ದಾಕ್ಷಿಣ್ಯ ಮೊದಲಾದ ಸದ್ಗುಣಗಳುಳ್ಳವರಾಗಿ ಶುದ್ಧ ಶಿವಭಕ್ತರಾಗಿ ಗು

ರುಲಿಂಗ ಜಂಗಮರನ್ನು ಸದಾ ಸಂತೋಷ ಪಡಿಸುವ ವ್ಯಾಪಾರ ಮುಳ್ಳವರಾಗಿ ರಾಗದ್ವೇಷಾ ಸೂಯ ಭಾವವರ್ಜಿತರಾಗಿ ಅವಂಚಕರಾಗಿ ಷಟ್ಸ್ಥಳಜ್ಞಾನ ಸಹಿತರಾಗಿ ಬಾಳಬೇಕೆಂದೀ ರಹಸ್ಯ ಮಾದಹಿತೋಪದೇಶವಂ ಮಾಡಿದ್ದಾಯಿತು——



*C. M. Veerabhadra Sharma*



ಈ ಪುಸ್ತಕವನ್ನು ಮಿ॥ ಯಶವಂತರಾವ ಸ್ವಾಮಿರಾವ ತಿಳಗೂಳ ಇವರು
ವಿಜಾಪೂರ ಗ್ರಾಮಾಧಿಕಾರೀ ಮುದ್ರಾಲಯದಲ್ಲಿ ಮುದ್ರಿಸಿ
ಅಲ್ಲಿಯೆ ಪ್ರಸಿದ್ಧ ಮಾಡಿದರು.